ओइम्

ಋಗ್ವೇದ | ಯಜುರ್ವೇದ | ಸಾಮವೇದ | ಅಥರ್ವವೇದ

# ವೇದಪ್ರಕಾಶ




ಸಂಪುಟ ೮ | ದುಂದುಭಿ ಸಂವತ್ಸರ ಆಶ್ವೀಜ-ಅಕ್ಟೋಬರ್ ೧೯೮೨ | ಸಂಚಿಕೆ ೭


ಸತ್ಯದರ್ಶಕರಿಗೆ-ತತ್ವನಿಷ್ಠರಿಗೆ-ವಿಚಾರವಾದಿಗಳಿಗೆ
ಮೆಚ್ಚಿಗೆಯ ಮಾಸಪತ್ರಿಕೆ

ವಿಷಯ ಸೂಚಿ | ಪುಟ ಸಂಖ್ಯೆ



## ಚಂದಾದಾರರಾಗುವ ಬಗ್ಗೆ ವಿಶೇಷ ಮಾಹಿತಿ


[೧] 'ವೇದಪ್ರಕಾಶ'ದ ವಾರ್ಷಿಕ ಚಂದಾ ರೂ. 15-00 [ಅಂಚೆ ವೆಚ್ಚ ಸೇರಿ]
ಆಜೀವ ಸದಸ್ಯತನ 150-00

[೨] ಚಂದಾ ಕಳುಹಿಸುವವರು ಎಂ. ಓ. ಅಥವಾ ಎಂ. ಟಿ ಮೂಲಕ ಕಳುಹಿಸಬಹುದು.

[೩] ಎಂ. ಟಿ. ಮೂಲಕ ಹಣ ಕಳುಹಿಸುವವರು, V. S. P. Samithi A/c. No. 12829, ಸಿಂಡಿಕೇಟ್ ಬ್ಯಾಂಕ್, ಕಾರ್‌ಸ್ಟ್ರೀಟ್, ಉಡುಪಿ 1ಕ್ಕೆ ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಯಿಂದ ಕಳುಹಿಸಬಹುದು. ಇದಕ್ಕೆ ಕಮಿಶನ್ ತೆರಬೇಕಾಗಿಲ್ಲ.

[೪] ಪತ್ರ ವ್ಯವಹಾರದ ವಿಳಾಸ:
ಪ್ರಕಾಶಕರು: "ವೇದಪ್ರಕಾಶ" ಕುಂಜಿಬೆಟ್ಟು, ಉಡುಪಿ-576 102.

**ಪ್ರಧಾನ ಸಂಪಾದಕರು**

ಶ್ರೀ ಪಂ॥ ಸುಧಾಕರ ಚತುರ್ವೇದೀ

ಜಯನಗರ, ಬೆಂಗಳೂರು

**ಉಪಸಂಪಾದಕರು**

ಶ್ರೀ ಪಂ॥ ಮಂಜುನಾಥ ಶಾಸ್ತ್ರಿ, ಎಂ. ಎ.

**ಸಹಾಯಕ ಸಂಪಾದಕರು**

ಶ್ರೀ ಕೆ. ವಿ. ಶೇಷಾಚಲಪತಿ, ಬಿ. ಎ.

**ಪ್ರಕಾಶಕರು**

ಶ್ರೀ ಪ॥ ಸಂಜೀವ ಕಾಮತ್,

ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ

ಕುಂಜಿಬೆಟ್ಟು, ಉಡುಪಿ-೫೭೬ ೧೦೨

**ಸಂಪಾದಕ ಮಂಡಲಿ**

ಡಾ॥ ಪ. ನಾರಾಯಣರಾವ್. M. A., Ph.D.

ಶ್ರೀ ಕು. ಶಿ. ಹರಿದಾಸ ಭಟ್, ಎಂ. ಎ.

ಶ್ರೀ ವೇದವ್ರತ, B.Sc.,M.A ,B Ed.

ಶ್ರೀ ಜ್ಯೇಷ್ಠವರ್ಮನ್, ಎಂ. ಎ. ಮುಂಬಯಿ

ಶ್ರೀ ಸುಕುಮಾರಶಾಸ್ತ್ರಿ, ಎಂ. ಎ., (ಸಂ.-ಹಿಂ.)

ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳ, ಎಂ. ಎ.

**ಮುದ್ರಕರು:**

ಶ್ರೀ ಗಣೇಶ್ ಪ್ರಿಂಟರ್ಸ್, ಅಳಕೆ, ಮಂಗಳೂರು.

ವಾರ್ಷಿಕ ಚಂದಾ: ಅಂಚೆ ಸೇರಿ ರೂ. ೧೫-೦೦

ಆಜೀವ ಸದಸ್ಯರಿಗೆ ರೂ. ೧೫೦-೦೦



# ವೇದಪ್ರಕಾಶ



ಸಂಪುಟ ೮ | ದುಂದುಭಿ ಸಂವತ್ಸರ ಆಶ್ವಯುಜ–ಅಕ್ಟೋಬರ -೧೯೮೨ | ಸಂಚಿಕೆ ೭

## ವೈದಿಕ ಪ್ರಾರ್ಥನೆ

**ಓಂ ಅಥಾ ತೇ ಅಂತಮಾನಾಂ ವಿದ್ಯಾಮ ಸುಮತೀನಾಮ್ ।**
**ಮಾ ನೋ ಅತಿ ಖ್ಯ ಆಗಹಿ ॥** [ಋಗ್ವೇದ: ೧-೪ ೩]

**ಶಬ್ದಾರ್ಥ:** – ಹೇ ಇಂದ್ರ [ತೆ] ನಿನ್ನ, [ಅಂತಮಾನಾಂ] ಸಮೀಪವರ್ತಿಗಳಾದ, ನಿನ್ನ ಆಜ್ಞೆಯಲ್ಲಿಯೇ ಸ್ಥಿತರಾಗಿರುವ, [ಸುಮತೀನಾಮ್] ಶ್ರೇಷ್ಠ ಬುದ್ಧಿಯ ಮಹಾತ್ಮರ ಸಂಪರ್ಕದಿಂದ, [ವಿದ್ಯಾಮ]ನಿನ್ನ ಯಥಾರ್ಥ ಸ್ವರೂಪದ ಜ್ಞಾನವನ್ನು ಹೊಂದಿದವರಾಗೋಣ [ನಃ] ನಮ್ಮನ್ನು [ಮಾ ಅತಿಖ್ಯಃ] ನಮ್ಮ ಹೃದಯದಲ್ಲಿ ನೆಲೆಸಿರುವ, ಮಹಾತ್ಮರ ಉಪದೇಶಗಳನ್ನು ಅತಿಕ್ರಮಿಸದಂತಹವರನ್ನಾಗಿ ಮಾಡು, ಬದಲಿಗೆ [ಆಗಹಿ] ಅವುಗಳನ್ನು ಪ್ರಾಪ್ತಿಸಿಕೊಳ್ಳುವಂತಾಗಲಿ.

**ಭಾವಾರ್ಥ:** ಹೇ ಸಚ್ಚಿದಾನಂದ ಸ್ವರೂಪನಾದ ಪರಮೇಶ್ವರ! ನೀನು ಸದಾಕಾಲ ನಮ್ಮನ್ನು ಸದಾಚಾರಿಗಳೂ ಪರೋಪಕಾರಿಗಳೂ ಆದ ವಿದ್ವಾಂಸರ ಸಂಪರ್ಕದಲ್ಲೇ ಇರುವಂತೆ ಅನುಗ್ರಹಮಾಡು. ಏಕೆಂದರೆ ಬಾಳಿನ ನಿಜವಾದ ಶಾಂತಿ, ಸುಖ–ಸಂತೋಷಗಳ ಆಗರನಾದ ನಿನ್ನ ಯಥಾರ್ಥ ಸ್ವರೂಪವು ಇಂತಹ ಸಜ್ಜನರ ಸಂಗದಿಂದಲೇ ಅರಿವಾಗುವುದು. ಎಲ್ಲಿಯ ವರೆಗೆ ನಿನ್ನ ವಾಸ್ತವಿಕ ಸ್ವರೂಪವನ್ನರಿಯಲಾರವೋ, ಕಲ್ಲು, ಮಣ್ಣು, ಲೋಹ, ಹುಲು ಮಾನವರನ್ನು ನಿನ್ನ ಸ್ಥಾನದಲ್ಲಿರಿಸಿ, ಉಪಾಸಿಸುತ್ತಿರುತ್ತೇವೋ ಅಲ್ಲಿಯ ವರೆಗೆ ನಿನ್ನ ಸಾಕ್ಷಾತ್ಕಾರದಿಂದ ಲಭಿಸಬಹುದಾದ ಆತ್ಮಿಕ ಆನಂದ ನಮ್ಮದಾಗಲಾರದು.

ಹೆ, ಸರ್ವಜ್ಞ, ನಿತ್ಯ ಶುದ್ಧ ಬುದ್ಧ ಮುಕ್ತ ಪರಮಾತ್ಮ! ನಿನ್ನ ಅಮರ ವಾಣಿಯಾದ ವೇದಗಳ ಅಧ್ಯಯನ, ಮನನಗಳ ಮೂಲಕ ತಮ್ಮ ಜೀವನದಲ್ಲಿ ಹೊಸ ಚೇತನ ಪಡೆದುಕೊಂಡ ಯಾವ ವಿದ್ವಜ್ಜನರ ಉಪದೇಶಗಳು ನಮ್ಮ ಹೃದಯ ಮಂದಿರಗಳಲ್ಲಿ ನೆಲೆಸಿವೆಯೋ, ಆ ಅಮೃತವಾಕ್ಯಗಳನ್ನು, ಆ ಮಹಾತ್ಮರ ಪವಿತ್ರ ಉಪದೇಶಗಳನ್ನು ನಾವೆಂದಿಗೂ ಉಲ್ಲಂಘಿಸದಿರೋಣ. ಅವುಗಳ ಉಲ್ಲಂಘನೆಯಿಂದಲೇ ಅಪಾರ ಕಷ್ಟನಷ್ಟಗಳಿಗೆ ನಾವು ಸಿಕ್ಕಿಹಾಕಿಕೊಂಡಿದ್ದೇವೆ. ನಾವು ಈಗ ಅನುಭವಿಸುತ್ತಿರುವ ಕಷ್ಟಗಳಾದರೋ ಆ ಪುಣ್ಯಪುರುಷರ ಉಪದೇಶಗಳ ಉಲ್ಲಂಘನೆಯ ಪರಿಣಾಮವೇ ಆಗಿದೆ. ಇನ್ನಾದರೂ ನಾವು ಆಪ್ತವಾಕ್ಯವಾದ ಋಷಿಮುನಿಗಳ, ಪರೋಪಕಾರೀ ವಿದ್ವಾಂಸರ ಉಪದೇಶಗಳನ್ನು ಆಲಿಸೋಣ, ತದನುಸಾರ ಆಚರಿಸೋಣ ಆಗ ನಮ್ಮೆಲ್ಲಾ ಸಂಕಷ್ಟಗಳೂ ನಿವಾರಣೆಯಾಗಿ ಬಾಳು ಸಹ್ಯವಾದೀತು! ಆನಂದದ ರುಚಿ ನಮಗೂ ಸಿಕ್ಕುವಂತಾದೀತು! ಇದೇ ನಮ್ಮ ಹಾರ್ದಿಕ ಕಾಮನೆ. ಇದು ಪೂರ್ಣಗೊಳ್ಳುವಂತೆ ಅನುಗ್ರಹಿಸು.

ಓಂ ಶಾಂತಿಃ ಶಾಂತಿಃ ಶಾಂತಿಃ

|| ಓಂ ಸತ್ಯಮೇವ ಜಯತೇ ನಾನೃತಂ || ಓಂ ||

ಜನಯಾ ದೈವ್ಯಂ ಜನಮ್

# ರಾಷ್ಟ್ರದ ಭವಿಷ್ಯ ಚುನಾವಣೆಯನ್ನವಲಂಬಿಸಿಕೊಂಡಿದೆಯೇ ?

ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕಂಡುಹಿಡಿಯಬೇಕಾದರೆ ನಾವೆಲ್ಲಾ ನಿಜವಾದ ಮಾನವರಾಗಿ ಮಾನವತೆಯನ್ನು ಬೆಳೆಸಿಕೊಂಡು ದೇವಜನರೆನಿಸಿಕೊಂಡಾಗ ಮಾತ್ರ ಸರಿಯಾದ ಉತ್ತರ ಸಿಕ್ಕೀತು! ನಮ್ಮ ರಾಷ್ಟ್ರವು ಸ್ವತಂತ್ರವಾಗಿ ೩೫ ವರುಷಗಳು ಕಳೆದರೂ ರಾಷ್ಟ್ರದ ಅಭಿವೃದ್ಧಿಯಾಗಲಿ, ಅಂದರೆ ಪ್ರಜಾ ಸಮೂಹವು ಸುಖ-ಶಾಂತಿಯಿಂದ ನೆಮ್ಮದಿಯಿಂದ ಇದೆ-ಎಂದು ಹೇಳಲು ಸಾಧ್ಯವಿಲ್ಲ. ಯಾಕಂದರೆ ರಾಷ್ಟ್ರದ ಅಭಿವೃದ್ಧಿ ಕಾರ್ಯಕ್ರಮಗಳು ಬೇಕಾದಷ್ಟಿದ್ದು ಅದರ ಬಗ್ಗೇನೇ ಅರ್ಥದ ಕೊರತೆ ಸಾಕಷ್ಟಿರುವಾಗ ಚುನಾವಣೆಗಾಗಿ ಕೋಟಿಗಟ್ಟಲೆ ಹಣ ವೆಚ್ಚಮಾಡಿ, ಪ್ರಜೆಗಳ ಮೇಲೆ ಮತ್ತೂ ಮತ್ತೂ ತೆರಿಗೆ ಹೊರಿಸುವುದು ಮೂರ್ಖತನ. ಅಷ್ಟು ಹಣ ಖರ್ಚು ಮಾಡಿಯೂ ಕ್ರಮಬದ್ಧವಾದ ನಿರ್ದೋಷ ನಿಷ್ಪಕ್ಷಪಾತ ಚುನಾವಣೆಗಳು ಈ ತನಕ ನಡೆದಿಲ್ಲ. ಹೊರ ರಾಷ್ಟ್ರಗಳ ಆಸರೆಯಿಲ್ಲದೆ ಯಾವ ಅಭಿವೃದ್ಧಿ ಕೆಲಸಗಳೂ ನಡೆಯುತ್ತಿಲ್ಲವೆನ್ನುವಾಗ ನಮ್ಮ ರಾಷ್ಟ್ರ ಎಷ್ಟು ಮುಂದುವರಿದಿದೆ—ಎಂಬುದು ಖಚಿತವಾಗುವುದು. ಚಿಕ್ಕ ಪುಟ್ಟ ರಾಷ್ಟ್ರಗಳಿಂದಲೂ ಆರ್ಥಿಕ ಸಹಾಯ ನಮಗೆ ಬೇಕಾಗಿದೆ—ಎಂದ ಮೇಲೆ ನಾವು ಈ ತನಕ ಸಾಧಿಸಿದ್ದೇನು? ರಾಷ್ಟ್ರಪ್ರಜ್ಞೆ ನಾಯಕರಲ್ಲಿಯೇ ಇಲ್ಲದಿರುವಾಗ ಪ್ರಜೆಗಳಿಗೆ ಅದರ ಪ್ರಜ್ಞೆ ಮೂಡುವುದೆಂತು ? ನಮ್ಮ ರಾಷ್ಟ್ರದಲ್ಲಿ ಸದಾಚಾರಿಗಳೂ, ಮೇಧಾವಿಗಳೂ ಇದ್ದರೆ ಅವರಿಂದ ಲಾಭಪಡೆಯುವವರು ಬೇರೆ ರಾಷ್ಟ್ರದವರು ಅವರನ್ನು ಸರಿಯಾಗಿ ನೋಡಿಕೊಂಡು ರಾಷ್ಟ್ರಾಭಿವೃದ್ಧಿ ಕೆಲಸಗಳನ್ನು ಅವರಿಂದ ಮಾಡಿಸಿಕೊಳ್ಳುವ ಭಾಗ್ಯ ನಮಗಿಲ್ಲ. ಮಂತ್ರಿಗಳ ಸಂಖ್ಯೆ ಬೆಳೆದಂತೆ ಎಲ್ಲಾ ಕಾರ್ಯಗಳೂ ಮಂದಗತಿಯಿಂದ ನಡೆಯುತ್ತಿರುವುದೇಕೆ ? ಈ ರಾಕ್ಷಸೀ ಪ್ರವೃತ್ತಿ ಬೆಳೆಯುತ್ತಿರುವುದೇಕೆ? ಎಲ್ಲರೂ ಹೇಳುತ್ತಿರುವುದು ಒಂದೇ ಹಾಡು "ರಾಷ್ಟ್ರದಾದ್ಯಂತ ಭ್ರಷ್ಟಾಚಾರ ಬೆಳೆಯುತ್ತಾ ಇದೆ" ಎಂದು. ವಿಜ್ಞಾನವು ಮುಂದುವರಿಯುತ್ತಾ ಅಮೇರಿಕಾ ಮತ್ತು ರಷ್ಯದವರು ಗ್ರಹೋಪಗ್ರಹಗಳ ಸಂಶೋಧನೆ ನಡೆಸುತ್ತಿರುವಾಗ ಭಾರತವು ಅದೇ ರೀತಿ ಮುನ್ನಡೆಯಬೇಕು. "ಅದಕ್ಕಾಗಿ ವ್ಯೋಮಯಾತ್ರಿಗಳ ತರಬೇತಿ ಸಿದ್ಧವಾಗುತ್ತಿದೆ" ಇದನ್ನು ಪ್ರಧಾನಿಗಳು ಪ್ರಕಟಪಡಿಸಿದ್ದಾರೆ.

ಸಾಮಾಜಿಕ ಜೀವನದಲ್ಲಿ ಜ್ಯೋತಿಷ್ಯರು ಹೇಳುವ ಒಂದು ವಿಷಯ ನೆನಪಿಗೆ ಬರುತ್ತಿದೆ. ಪಂಚಮದ ಶನಿ, ಏಳುವರೆ ಶನಿ-ಇತ್ಯಾದಿ ಜೊತೆಯಲ್ಲಿ ಇನ್ನೂ ಕೆಲವು ಗ್ರಹಗಳು ವಕ್ರವಾಗಿದ್ದರೆ ಯಾವ ಯಾವ ರೀತಿಯಲ್ಲಿ ಜನರನ್ನು ಪೀಡಿಸುತ್ತವೆ-ಎಂಬ ಶನಿಕಾಟದ ಬಗ್ಗೆ ಹೇಳುತ್ತಿರುವುದನ್ನು ಕೇಳಿದ್ದೇವೆ. ನಮ್ಮ ರಾಷ್ಟ್ರಕ್ಕೆ ತಗಲಿದ ಈ ಶನಿ ಯಾವುದು ? (೧) ಆಲಸ್ಯ-ಮಿತಿಮೀರಿ ಬೆಳೆದು, ಕರ್ತವ್ಯಚ್ಯುತರಾಗಿ ಭ್ರಷ್ಟಾಚಾರದ ಮೂಲಕ ಹಣದ ಸಂಪಾದನೆ ಮಾಡುವವರ ಸಂಖ್ಯೆಬೆಳೆಯುತ್ತಿದೆ. (೨) ಮೈಮುರಿದು ಬೆವರಿಳಿಸಿ ದುಡಿಯುವ ಅಭ್ಯಾಸ ನಿಂತು ಕಳ್ಳತನ, ದರೋಡೆ, ಜೂಜು, ಲಂಚ ಇತ್ಯಾದಿ ಸುಲಭಮಾರ್ಗದ ಅರ್ಥಸಂಚಯಕ್ಕೇ ಶನಿ ಗುರುವಾಗಿದ್ದಾನೆ. ಈ ಶನಿಯು ಕಾರ್ಯಕಲಾಪಗಳಿಗೆ ಅನೈತಿಕತೆ ಪ್ರೋತ್ಸಾಹ ನೀಡು

ತ್ತಿದೆ. ಇದನ್ನು ತಡೆಯುವ ಶಕ್ತಿ ಸದಾಚಾರಿಗಳಾದ ನಿತ್ಯ ಜಾಗೃತರಿಂದ ಮಾತ್ರ ಸಾಧ್ಯ. ಇಂಥವರನ್ನು ಅರಸುವುದೆಲ್ಲಿ ಮತ್ತು ಹೇಗೆ?

ದಿನ ಪತ್ರಿಕೆಗಳಲ್ಲಿ ಸದಾ ನಾವು ಓದುತ್ತಿರುವ ವಾರ್ತೆಯಲ್ಲಿ ಇಂದ್ರನ ಸ್ವರ್ಗಾಧಿಪತ್ಯದಲ್ಲಿಯೂ ಬ್ಯಾಂಕ್‌ದರೋಡೆ, ಕಳ್ಳತನ, ಅಗ್ನಿಬಾಧೆ, ಸುಲಿಗೆ, ಅನೈತಿಕತೆ—ಇದೆ ಎಂದಾದಲ್ಲಿ ಬೇರೆ ಕಡೆ ಅದರ ಹಾವಳಿ ಹೆಚ್ಚಾದಲ್ಲಿ ಚಿಂತಿಸಬೇಕಾಗಿಲ್ಲ. ಈ ರಾಕ್ಷಸ ಸಮೂಹ ಸ್ವರ್ಗದ ಆಡಳಿತಕ್ಕಾಗಿ ದಬ್ಬಾಳಿಕೆ ನಡೆಸುತ್ತಿದೆ—ಎಂದ ಮೇಲೆ ಅಲ್ಲಿ ದೇವತೆಗಳ ರಾಜ್ಯ ನಶಿಸಿದೆ—ಎಂದಾಯಿತಲ್ಲವೇ? ಈಗ ನಡೆಸುವ ಚುನಾವಣೆ ರಾಕ್ಷಸರ ಪರವಾಗಿಯೇ ಸೈನ್ಯ ಕಟ್ಟಲು ಸಿದ್ಧವಾಗುತ್ತದೆ-ಎಂಬುದು ಸ್ಪಷ್ಟ. ಈ ರಾಕ್ಷಸರು, ಮದಿರೆಯ ಅಮಲಿಗೆ ತುತ್ತಾಗಿ ರಾಷ್ಟ್ರದಾದ್ಯಂತ ತಮ್ಮ ಆಧಿಪತ್ಯವಾಗಬೇಕೆಂದು ಅಪೇಕ್ಷಿಸುವುದು ಸಹಜವೇ ಅಲ್ಲವೇ? ಅಮೃತಪಾನ ಮಾಡುವ ದೇವತೆಗಳು ಕಣ್ಮರೆಯಾಗಿದ್ದಾರೆ. ಈಗ ನಾವೆಲ್ಲರೂಂದಾಗಿ ದೇವತೆಗಳ ರಾಜ್ಯವನ್ನು ಸ್ಥಾಪಿಸಲು ಪರಮಾತ್ಮನಲ್ಲಿ ಮೊರೆಯಿಡಬೇಕು. ರಾಕ್ಷಸರ ಉಪಟಳದಿಂದ ದೇವತೆಗಳೆಲ್ಲಾ ಚೆಲ್ಲಾಪಿಲ್ಲಿಯಾಗಿದ್ದಾರೆ. ಚುನಾವಣೆಯೆಂಬ ಕುರುಕ್ಷೇತ್ರದಲ್ಲಿ, ಯುದ್ಧಕ್ಕೆ ಸನ್ನದ್ಧವಾಗಿದೆ. ಅಂಧನಾದ ಧೃತರಾಷ್ಟ್ರನ ಎದುರು ಕಾದಾಡಲು ಯುಧಿಷ್ಠಿರನ ಸೇನೆ ತಯಾರಾಗಬೇಕು. ದಾನವರು ಮಾನವರಾಗದೆ ಧರ್ಮಯುದ್ಧ ನಡೆಸುವುದು ಅಸಾಧ್ಯ. ನಮ್ಮ ಭಾರತದಲ್ಲಿ ಅಸಂಖ್ಯ ಜಾತಿ—ಉಪಜಾತಿಗಳು, ಭಿನ್ನ ಭಿನ್ನ ಮತಗಳು, ನಮ್ಮನ್ನು ಒಂದಾಗಲು ಆತಂಕ ಪಡಿಸುತ್ತಿವೆ. ಈ ಮತ ಸಂಪ್ರದಾಯದ ಸೇನಾನಾಯಕರಲ್ಲಿ ಒಮ್ಮತವಾಗದೆ ಪ್ರಜಾಸಮೂಹ ಒಂದಾಗುವುದು ಬಹಳ ಕಷ್ಟ. ಆದಕ್ಕಾಗಿ ವೇದ ಹೇಳುತ್ತಿದೆ—ಭಾರತದ ಪ್ರಜೆಗಳೇ! ನಿಮ್ಮ ಅನಿಷ್ಟವು ನೀಗಬೇಕಾದರೆ ನೀವೆಲ್ಲರೊಂದಾಗಿ **"ಮನುರ್ಭವ ಜನಯಾದೈವ್ಯಂಜನಂ"** [ಋಗ್ವೇದ ೧೦-೫೩-೬] "ದೈವೀ ಗುಣಗಳಿಂದ ಸುಶೋಭಿತರಾದ ಸರ್ವ ಜನಹಿತಕಾರಿ ಜನರನ್ನು ಒಂದುಗೂಡಿಸುತ್ತಾ ಮುಂದೆಯೂ ಅಂತಹ ಜನರನ್ನು ಉತ್ಪನ್ನ ಮಾಡಿರಿ! ಆದರೆ ಮೊದಲು ಮಾನವರಾಗಿರಿ! ದಾನವೀಯ ಗುಣಗಳನ್ನು ತ್ಯಜಿಸಿರಿ. [ಭಾನುಂ ಅನುಂ ಇಹಿ] ಜ್ಞಾನವೆಂಬ ಪ್ರಕಾಶದ ಹಿಂಬಾಲಕರಾಗಿ **[ಧಿಯಾಕೃತಾನ್]** ಬುದ್ಧಿಯಿಂದ ಪರಿಷ್ಕರಿಸಿರುವ **[ಜ್ಯೋತಿಷ್ಮತಃ]** ಜ್ಯೋತಿರ್ಮಯ ಪ್ರಕಾಶಯುಕ್ತ **[ಪಥಃ ರಕ್ಷ]** ಮಾರ್ಗವನ್ನು ರಕ್ಷಿಸುತ್ತಾ **[ಜೋಗುವಾಂ]** ನಿರಂತರವಾಗಿ ಜ್ಞಾನದ ಮತ್ತು ಕರ್ಮದ ಅನುಷ್ಠಾನ ಮಾಡುವವರ **[ಅನುಲ್ಬಣಂ]** ಉದ್ವೇಗರಹಿತವಾದ **[ಅಪಃ]** ಕಾರ್ಯಗಳನ್ನು ವಿಸ್ತೃತವನ್ನಾಗಿ ಮಾಡುತ್ತಾ, **[ಮನುರ್ಭವ]** ಮಾನವರಾಗಿರಿ. ಈ ಮಾನವ ಸಮುದಾಯವನ್ನು ವೇದಗಳಲ್ಲಿ **'ಆರ್ಯರು'** ಎಂದು ಹೇಳಲ್ಪಟ್ಟಿದೆ. **["ಆರ್ಯಾಃ ಜ್ಯೋತಿರಗ್ರಾಃ"]** ಜ್ಞಾನದ ಜ್ಯೋತಿಯನ್ನು ಮುಂದಿಟ್ಟುಕೊಂಡು ನಡೆಯುವವರೇ ಆರ್ಯರು. ಇಂತಹ ಶ್ರೇಷ್ಠ ಜನರನ್ನು ಕುರಿತು ವೇದವು ಹೇಳಿಯೇ ಇದೆ—**[ಮಿತ್ರಸ್ಯ ಚಕ್ಷುಷಾ ಸಮೀಕ್ಷಾಮಹೇ]** ಎಲ್ಲರನ್ನೂ ಸ್ನೇಹದೃಷ್ಟಿಯಿಂದಲೇ ನೋಡುವೆ, ನೀವು ಸಹ ಪರಸ್ಪರ ಪ್ರೀತಿಯಿಂದಲೇ ನೋಡಿರಿ. ಪರಮಾತ್ಮನು ಈ ರೀತಿ ಆದೇಶವಿತ್ತಿದ್ದಾನೆ:—

**ಸಂಗಚ್ಛಧ್ವಂ ಸಂ ವದಧ್ವಂ ಸಂ ವೋ ಮನಾಂಸಿ ಜಾನತಾಮ್ ।** ನಿಮ್ಮೆಲ್ಲರ ನಡೆ ಒಂದಾಗಿರಲಿ, ನುಡಿಯೂ ಒಂದಾಗಿರಲಿ, ನಿಮ್ಮೆಲ್ಲರ ವಿಚಾರಗಳೂ ಒಂದಾಗಿರಲಿ. ದಾನ

ವತೆಯನ್ನು ನೀಗಿಸಿಕೊಂಡು, ಮಾನವತೆಯನ್ನು ಮೂಡಿಸಿಕೊಂಡಾಗ ["ವಸುಧೈವ ಕುಟುಂಬಕಂ"] ಜಗತ್ತನ್ನೇ ತನ್ನ ಕುಟುಂಬವೆಂದು ಪ್ರೀತಿಸುತ್ತಾರೋ ಆವಾಗಲೇ ಕುಟುಂಬದಲ್ಲಿ ಮಮತೆಯ ಸಾಮ್ರಾಜ್ಯ ನೆಲೆಗೊಳ್ಳುತ್ತದೆ. ಈ ಸಂದರ್ಭದಲ್ಲಿ ಮಾನವನ ಹೃದಯಾಂತರಾಳದಿಂದ ಹೊರಡುವ ವಾಕ್ಯವಿದು-['ಸರ್ವೇ ಜನಾಃ ಸುಖಿನೋ ಭವಂತು"]—ಎಲ್ಲಾ ಜನರೂ ಸುಖಿಗಳಾಗಲಿ. ಈ ರೀತಿ ಪ್ರಾರ್ಥಿಸುವ ಜನರನ್ನು ಉದ್ದೇಶಿಸುತ್ತಾ [ಕೃಣ್ವಂತೋ ವಿಶ್ವಮಾರ್ಯಂ] ಪ್ರಪಂಚದ ಜನರನ್ನೆಲ್ಲಾ ಆರ್ಯ (ಶ್ರೇಷ್ಠ)ರನ್ನಾಗಿ ಮಾಡಿರಿ, ಎಂದು ಕರೆಕೊಡುತ್ತದೆ ವೇದ ಈ ರೀತಿ ಮುಂದುವರಿಯುವ ಜನತೆಯಲ್ಲಿ ಸ್ಥಾನದ ಹಿರಿಮೆಯು ತಲೆದೋರಿದಾಗ ತಾನು ಜ್ಯೇಷ್ಠ, ಅವನು ಕನಿಷ್ಠ-ಎಂಬ ಭಾವನೆ ಉಂಟಾಗುವ ಸಂಭವವಿದೆ. ಈ ಸಂದರ್ಭದಲ್ಲಿ ವೇದವು ಎಚ್ಚರಿಸುತ್ತಾ ಈ ರೀತಿ ಹೇಳುತ್ತಿದೆ:—

ಅಜ್ಯೇಷ್ಠಾಸೋ ಅಕನಿಷ್ಠಾಸ ಏತೇ
ಸಂಭ್ರಾತರೋ ವಾವೃಧುಃ ಸೌಭಗಾಯ ।
ಯುವಾ ಪಿತಾ ಸ್ವಪಾರುದ್ರ ಏಷಾಂ
ಸುದುಘಾ ಪೃಶ್ನಿಃ ಸುದಿನಾ ಮರುದ್ಭ್ಯಃ ॥

[ಋಗ್ವೇದ ೫ ೬೦-೫]

ಈ "ಮಾನವರು ಯಾರೂ (ಜ್ಯೇಷ್ಠ) ದೊಡ್ಡವರಲ್ಲ. ಯಾರೂ (ಕನಿಷ್ಠ) ಚಿಕ್ಕವರೂ ಅಲ್ಲ. ಇವರು ಪರಸ್ಪರ ಅಣ್ಣ ತಮ್ಮಂದಿರು. ಸೌಭಾಗ್ಯಪ್ರಾಪ್ತಿಗಾಗಿ ಮುಂದುವರಿಯುತ್ತಾರೆ. ಅಜರನೂ ಆತ್ಮರಕ್ಷಕನೂ, ದುಷ್ಟರಿಗೆ ದಂಡನೀಡುವವನೂ ಆದ ಪ್ರಭುವು ಇವರೆಲ್ಲರ ತಂದೆ. ಭೂಮಾತೆ, ಈ ಮರ್ತ್ಯರಿಗೆಲ್ಲಾ ಉತ್ತಮ ಶಕ್ತಿಯನ್ನೆರೆಯುವವಳೂ, ಉತ್ತಮ ದಿನಗಳನ್ನು ತೋರಿಸುವವಳೂ ಆಗಿದ್ದಾಳೆ. [ಮತ್ವಾಕರ್ಮಾಣಿಸೀವ್ಯತಿ] ಪೂರ್ಣ ವಿಚಾರ ಮಾಡಿ, ಪರರ ಒಳಿತಿಗಾಗಿ ಕರ್ಮಮಾಡುವವರೇ ಮನುಷ್ಯರು ಎಂಬುದನ್ನು ಮನದಲ್ಲಿ ಮೂಡಿಸಿಕೊಳ್ಳಬೇಕು.

ಜ್ಯೇಷ್ಟ—ಕನಿಷ್ಠರೆಂಬ ಭಾವನೆ ಅಳಿದು ಶ್ರೇಷ್ಠರೆಂಬ ಭಾವನೆ ಮೂಡಿ ಮುಂದುವರಿಯುತ್ತಿರುವಾಗ ಪರಸ್ಪರರಲ್ಲಿ ಪ್ರೀತಿಯೂ, ರಾಷ್ಟ್ರಪ್ರಜ್ಞೆಯೂ ಉಂಟಾಗುವುದು. ಸರ್ವರಲ್ಲಿಯೂ ರಾಷ್ಟ್ರಪ್ರಜ್ಞೆ ಜಾಗೃತವಾದಾಗ ರಾಷ್ಟ್ರದ ಹಾಗೂ ಸಮಾಜದ ಪರವಾಗಿ ತಾನು ಮಾಡುವ ಕರ್ತವ್ಯಗಳೇನು? ಎಂಬುದರ ಅರಿವಾಗಿ, ಎಲ್ಲರೂ ರಾಷ್ಟ್ರಸೇವಕರೆಂಬ ಭಾವನೆ ಮೂಡಿಬಂದರೆ ಚುನಾವಣೆಯ ಆವಶ್ಯಕತೆಯೇ ಇರುವುದಿಲ್ಲ, ಪ್ರತಿಯೊಂದು ರಾಷ್ಟ್ರಾಭಿವೃದ್ಧಿಯ ಕೆಲಸದಲ್ಲಿ ಎಲ್ಲರೂ ಸೇರಿಮಾಡುವ ಉತ್ಸಾಹ ಒಡಮೂಡಿ ರಾಷ್ಟ್ರದ ಅಭಿವೃದ್ಧಿ ತನ್ನಂತಾನೇ ಆಗುವುದು. ಆದರೆ ಈಗ ಚುನಾವಣೆಯಲ್ಲಿ ಸ್ಪರ್ಧಿಸುವ ಹುರಿಯಾಳುಗಳು ವೇದಿಕೆಯಲ್ಲಿ ನಿಂತು 'ನಿಮ್ಮ ಸೇವೆಮಾಡುವ ಅವಕಾಶ ಒದಗಿಸಿಕೊಡಿ. ಅದಕ್ಕಾಗಿ ನಿಮ್ಮ ಅಮೂಲ್ಯವಾದ ಮತವನ್ನು ನನಗೆ ಕೊಡಬೇಕಾಗಿ ವಿನಂತಿಸುತ್ತೇನೆ'-ಎಂಬ ಈ ಘೋಷಣೆ ಕೇವಲ ತಾತ್ಕಾಲಿಕ. ಸ್ಥಾನವನ್ನಲಂಕರಿಸಿದ ಮೇಲೆ ಸೇವೆ ದೂರವಾಗಿ 'ಮೇವ್' ಮಾಡುವ ವಿಧಾನ ಹೇಗೆ—ಎಂಬ ಚಿಂತನೆ ಮಾಡುವ ವ್ಯಕ್ತಿಗಳನ್ನು ನಾವು ನೋಡುತ್ತಾ ಇದ್ದೇವೆ. ಇದು ರಾಷ್ಟ್ರನಾಯಕರಲ್ಲಿ ಇರುವ

ಸೇವಾ ಮನೋಭಾವನೆ. ಆದ್ದರಿಂದಲೇ ಚುನಾವಣೆಗೆ ನಿಲ್ಲುವ ಹುರಿಯಾಳುಗಳು ಅರ್ಥ ಸಂಪಾದನೆಯ ಕಡೆಗೆ ಹೆಚ್ಚಿನ ಪ್ರಾಧಾನ್ಯವಿತ್ತು ರಾಷ್ಟ್ರಾಭಿವೃದ್ಧಿಯ ಕೆಲಸಗಳು ಕಡೆಗಣಿಸಲ್ಪಡುವುವು. ಈ ಕಾರಣದಿಂದ ಒಂದು ಸ್ಥಾನಕ್ಕೆ ಇಪ್ಪತ್ತು-ಮೂವತ್ತು ಜನರು ಅರ್ಜಿ ಸಲ್ಲಿಸುತ್ತಿರುವುದು, ಬೇರೆ ಬೇರೆ ಪಕ್ಷ ಕಟ್ಟಿ ಜನತೆಯಿಂದ ಹಣ ಶೇಖರಿಸುವುದು ನೋಡುವಾಗ, ಚುನಾವಣೆಯೊಂದು ಹಣಗಳಿಸುವ ನವೀನ ಕೈಗಾರಿಕೆಯಂತೆ ನಡೆಯುತ್ತಿದೆ ಎನ್ನಬಹುದು. ಅದಕ್ಕಿಂತ ರಾಷ್ಟ್ರದ ಜನರಲ್ಲಿ ಯಾರು ಸದಾಚಾರಿಗಳೋ ಮತ್ತು ಮೇಧಾವಿಗಳೋ, ರಾಷ್ಟ್ರ ಸೇವಾ ನಿರತರೋ ಎಂಬುದನ್ನು ಪರಿಶೀಲಿಸಿ ಅಂತಹ ಜನರನ್ನು ಆರಿಸಿ ರಾಷ್ಟ್ರಾಭಿವೃದ್ಧಿ ಕೆಲಸಕ್ಕೆ ನಿಯುಕ್ತಗೊಳಿಸುವುದು ಉತ್ತಮ. ನಾವು ಬಹುಮತದಿಂದ ಆರಿಸಿ ಬಂದಿದ್ದೇವೆ ಎಂಬವರಿಗೆ ಸಿಕ್ಕುವ ಮತಗಳು ರಾಷ್ಟ್ರಪ್ರಜ್ಞೆಯುಳ್ಳ ವಿವೇಕಿಗಳಿಂದ ಖಂಡಿತ ದೊರೆತವುಗಳಲ್ಲ. ಮದಿರಾಪಾನದಿಂದ ಉನ್ಮತ್ತರಾದ ಮತಿಹೀನ ಚಾರಿತ್ರ್ಯಹೀನರ ಮತಗಳನ್ನು ಬಹುಮತವೆನ್ನುವದಾದರೆ, ಅದೆಂದಿಗೂ ಪ್ರಜಾಪ್ರಭುತ್ವಕ್ಕೆ ರಾಷ್ಟ್ರನಿರ್ಮಾಣಕ್ಕೆ ದೊರಕಿದ ಮತಗಳೆನ್ನಲಾಗದು, ಆದಕಾರಣ ಸಂಕಾರದ ಯಾವ ಕೆಲಸಗಳೂ ಸರಿಯಾದ ರೀತಿಯಲ್ಲಿ ನಡೆಯುತ್ತಿಲ್ಲ. 'ವೆಚ್ಚ ಜಾಸ್ತಿ—ಬಾಳಿಕೆ ಕಮ್ಮಿ' ಹೀಗಾಲು ಕಾರಣವೇನು? ದೊಡ್ಡ ದೊಡ್ಡ ಕೆಲಸಗಳಲ್ಲಿ ಮಂತ್ರಿಯಿಂದ ಹಿಡಿದು ಕೆಲಸಮಾಡಿಸುವ ಮೇಸ್ತ್ರಿಯ ವರೆಗೂ ಹಣದ ಪೋಲಾಗಿ, ನೂರು ವರ್ಷಗಳ ವರೆವಿಗೂ ಭದ್ರವಾಗಿರಬೇಕಾದ ಕಟ್ಟಡ, ಅಣೆಕಟ್ಟು ಇತ್ಯಾದಿಗಳು ಹತ್ತಿಪ್ಪತ್ತು ವರುಷದ ಬಾಳಿಕೆಯೂ ಇಲ್ಲದೆ ಕುಸಿದು ಬೀಳುವುವನ್ನು ನೋಡುತ್ತಿದ್ದೇವೆ. ಆದ್ದರಿಂದ ಪ್ರಜೆಗಳಾಗಲಿ, ಪ್ರಜಾಪಾಲಕರಾಗಲಿ ರಾಷ್ಟ್ರಪ್ರಜ್ಞೆ ಬೆಳೆಸಿಕೊಳ್ಳುವುದು ಅಗತ್ಯ. ರಾಷ್ಟ್ರದ ಉತ್ಪಾದನೆಯಲ್ಲಿ ತಮ್ಮ ಪಾತ್ರ ಬಹು ಮುಖ್ಯ ಎಂಬುದನ್ನು ತಿಳಿಯಬೇಕು ರಾಷ್ಟ್ರದ ಗೌರವವು ಇನ್ನಿತರ ರಾಷ್ಟ್ರಗಳಿಗೆ ಆದರ್ಶವಾಗುವಂತಾಗಬೇಕು. ನಮ್ಮ ರಾಷ್ಟ್ರದ ಮೇಧಾಶಕ್ತಿಯುತರು ಪರರಾಷ್ಟ್ರಗಳಿಗೆ ಹೋಗಿ ಅಲ್ಲಿ ಪ್ರತಿಭೆ ವಿನಿಯೋಗವಾಗದಂತೆ, ಇಲ್ಲಿಯೇ ಸದ್ವಿನಿಯೋಗವಾಗುವಂತೆ, ಏರ್ಪಡಿಸಬೇಕು, ರಾಷ್ಟ್ರಭಕ್ತಿ ಎಲ್ಲರಲ್ಲೂ ಬೆಳೆದು ರಾಷ್ಟ್ರದ ಸೇವೆ ಮಾಡುವಂತೆ ಪ್ರಯತ್ನಿಸಬೇಕಾಗಿದೆ. ಭಾರತದ ರಾಷ್ಟ್ರಪತಿಯಿಂದ ಹಿಡಿದು ಒಬ್ಬ ಸಾಮಾನ್ಯ ವ್ಯಕ್ತಿಯೂ ಈ ರಾಷ್ಟ್ರದ ಪ್ರಜೆ ಎಂಬುದನ್ನು ಸಂವಿಧಾನದಲ್ಲಿ ಹೇಳಲಾಗಿದೆ. ಮೂರು ವರುಷಗಳಷ್ಟು ದೀರ್ಘಕಾಲ ಸಂವಿಧಾನ ರಚನೆಗೆ ಪಟ್ಟ ಕಷ್ಟ ನಮ್ಮ ದೇಶದ ಉಳಿವಿಗಾಗಿ ಮತ್ತು ಅಭಿವೃದ್ಧಿಗಾಗಿ ಹಾಗೂ ರಾಷ್ಟ್ರಪ್ರಜ್ಞೆ ಸರ್ವರಲ್ಲೂ ಬೆಳೆಸಲಿಕ್ಕಾಗಿ ಎಂಬುದನ್ನು ತಿಳಿಯಬೇಕಾಗಿದೆ. ನಾವೆಲ್ಲರೂ ಭಾರತ ಮಾತೆಯ ಸೇವಕರ—ಎಂಬ ದೃಢಪ್ರತಿಜ್ಞೆ ಮಾಡುತ್ತಾ ಅದಕ್ಕೆ ವಿರುದ್ಧವಾದ ಯಾವುದೆ ಕೆಲಸ ಯಾರಿಂದಲೇ ನಡೆಯಲಿ ಆತನು ಶಿಕ್ಷಾರ್ಹನಾಗುತ್ತಾನೆ. ಅವನ ಸ್ಥಾನಮಾನಗಳು ರಾಷ್ಟ್ರದ ಮುಂದೆ ಒಂದು ಕಸದ ಕಡ್ಡಿಯಂತೆ—ಎಂಬ ಸದ್ವಿಚಾರ ಯಾವ ಮನುಷ್ಯನ ನರನಾಡಿಗಳಲ್ಲಿಯೂ ರಕ್ತದ ಕಣ ಕಣಗಳಲ್ಲಿಯೂ ಪ್ರವಹಿಸಬೇಕು, ನಮ್ಮ ಎಲ್ಲಾ ರಾಷ್ಟ್ರನಾಯಕರಲ್ಲಿ ಅಂತಹ ಪ್ರಜ್ಞೆ ಮೂಡಿ, ಮಹಾತ್ಮಾ ಗಾಂಧಿಯವರು ಕನಸು ಮನಸಿನಲ್ಲಿಯೂ ಜ್ಞಾಪಿಸುತ್ತಿದ್ದ ರಾಮರಾಜ್ಯದ ಕಲ್ಪನೆ ಸತ್ಯವಾಗಲಿ. ರಾಮರಾಜ್ಯದಲ್ಲಿ ಚುನಾವಣೆಗಳೇ ಇಲ್ಲಿಲ್ಲ—ಸತ್ಯ ಧರ್ಮಗಳೇ ಆಧಾರಸ್ಥಂಭಗಳಾಗಿದ್ದುವು. ಆ ದಯಾಮಯನಾದ ಪರಮಾತ್ಮನು ಪ್ರಜಾವರ್ಗದವರಿಗೂ, ಪ್ರಜಾಪಾಲಕರಿಗೂ ಸತ್ಪ್ರೇರಣೆ ನೀಡುತ್ತಾ ನಮ್ಮನ್ನು ಕಾಪಾಡಲಿ. ಭಾರತವು ಸಂಪದ್ಭರಿತವಾದ ರಾಷ್ಟ್ರವಾಗಿ

ಮೀರಿಯಲಿ–ಎಂಬುದಾಗಿ ಪರಮಪಿತ ಪರಮಾತ್ಮನಲ್ಲಿ ಕಳಕಳಿಯಿಂದ ಪ್ರಾರ್ಥಿಸೋಣ. ಹರಿಜನ ಗಿರಿಜನ-ಅಲ್ಪಸಂಖ್ಯಾತರು ಎಂಬ ತಾರತಮ್ಯದಿಂದ, ಘರ್ಷಣೆಗಳು–ಕೊಲೆ ಸುಲಿಗೆಗಳು ಜಾಸ್ತಿಯಾಗಿ ಸರ್ವತ್ರ ಅಶಾಂತಿಯೇ ತಾಂಡವವಾಡುತ್ತಿರುವುದನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದೇವಲ್ಲ. ರಾಷ್ಟ್ರಘಾತುಕ ಶಕ್ತಿಗಳು ತಲೆ ಎತ್ತದಂತೆ ಮಾಡುವುದು ಸರಕಾರದ ಆದ್ಯಕರ್ತವ್ಯ. ತರುಣ ಪೀಳಿಗೆ; ಮುಂದಿನ ಜನಾಂಗವನ್ನು ಸದಾಚಾರಸಂಪನ್ನರಾದ ರಾಷ್ಟ್ರಭಕ್ತರನ್ನಾಗಿ ಮಾಡಲು ಸರ್ವತ್ರ ಪ್ರಯತ್ನಗಳು ನಡೆಯಬೇಕು. ವಿದ್ಯೆಯ ಮಟ್ಟವನ್ನು ಕೆಳಗಿಳಿಸದೆ ಅದನ್ನು ಮತ್ತೂ ಉನ್ನತ ಮಟ್ಟಕ್ಕೇರಿಸುವ ಪ್ರಯತ್ನಗಳು ನಡೆಯಬೇಕು. ಸರಿಯಾದ ಹೊಣೆಗಾರಿಕೆಯುಳ್ಳಂತಹ ಸದಾಚಾರಿಗಳನ್ನೇ ಅಧಿಕಾರ ವರ್ಗಕ್ಕೆ ನಿಯಮಿಸಿದರೆ, ಭ್ರಷ್ಟಾಚಾರ ನಡೆಯಲಾರದು. ಭ್ರಷ್ಟಾಚಾರ ರಾಷ್ಟ್ರಕ್ಕೊಂದು ಅಭಿಶಾಪ. ಸ್ವತಂತ್ರ ವಿಚಾರಶಕ್ತಿಯುಳ್ಳ ಮೇಧಾವಿಗಳಾಗುವಂತೆ, ವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳಿಗೆ ಬೇಕಾದ ಅವಕಾಶ ದೊರೆಯಬೇಕು. ಅವರು ದುರ್ಮಾರ್ಗ ಪ್ರವೃತ್ತರಾಗದಂತೆ ವಿದ್ಯಾಸಂಸ್ಥೆಯವರೂ ಸರಕಾರವೂ–ಹೆತ್ತವರೂ ಕೂಡಿ ಪ್ರಯತ್ನಿಸಬೇಕು. "ವಿದ್ಯಾವಿನಯೇನ ಶೋಭತೇ" ಎಂಬಂತೆ ವಿದ್ಯಾರ್ಥಿಗಳಲ್ಲಿ ವಿನಯಗಳನ್ನು ಬೆಳೆಸುತ್ತಾ, ಅವರನ್ನು ದೃಢಕಾಯರೂ ನಿರೋಗಿಗಳೂ ಆಗುವಂತೆ ಶಾಲಾ ಕೋಲೇಜುಗಳಲ್ಲಿ ಯೋಗಾಸನ ಪ್ರಾಣಾಯಾಮಾದಿಗಳಿಂದ ಬ್ರಹ್ಮಚರ್ಯ ರಕ್ಷಣೆಗೆ ಅವಕಾಶ ಕೊಟ್ಟರೆ ಭವಿಷ್ಯದಲ್ಲಿ ಒಳಿತನ್ನು ನಿರೀಕ್ಷಿಸಬಹುದು. ಪ್ರತಿಯೊಂದು ರಾಷ್ಟ್ರಕ್ಕೂ ಅವರವರದೇ ಧರ್ಮಸಂಸ್ಕಾರಗಳಿವೆಯಾದರೆ ಭಾರತಕ್ಕಿಲ್ಲವೆ? ಅದನ್ನು ಬೆಳೆಸಲು ಉಳಿಸಲು ಪ್ರಯತ್ನಿಸೋಣ, ಸತ್ಕರ್ಮಗಳನ್ನೇ ಮಾಡುತ್ತಾ ಮಾಡಿಸುತ್ತಾ ನೂರು ವರ್ಷಗಳವರೆಗೆ ಸುಖದಿಂದ ಬಾಳೋಣ.

---

## ವೇದಗಳಲ್ಲಿ ನಮಗೇಕೆ ಇಷ್ಟು ಶ್ರದ್ಧೆ?

❁ ಶ್ರೀ ಪಂ|| ಸುಧಾಕರ, ಚತುರ್ವೇದಿ

ನಿರಾಕಾರನೂ, ನಿರ್ವಿಕಾರನೂ, ಸರ್ವವ್ಯಾಪಕನೂ, ಸರ್ವಜ್ಞನೂ, ಆನಂದಮಯನೂ ಆದ ಪರಮಾತ್ಮನ, ಉಪಾಸಕರ ಮತ್ತು ಉಪಾಸನೆಯ ಬಗ್ಗೆ ವೈದಿಕ ಧರ್ಮದ ದೃಷ್ಟಿಕೋಣವೇನಿದೆ–ಎಂಬುದನ್ನು ತಿಳಿಯಲು ಯತ್ನಿಸೋಣ.

ಈಗ 'ಭಕ್ತಿ' ಎಂಬ ಶಬ್ದ ಯಾವ ಭಾವನೆಯಲ್ಲಿ ಬಳಸಲ್ಪಡುತ್ತದೋ, ಆ ಭಾವನೆಯನ್ನು ಸೂಚಿಸಲು ವೇದಗಳಲ್ಲೆಲ್ಲಿಯೂ ಆ ಶಬ್ದ ಬಂದಿಲ್ಲ. ವಸ್ತುತಃ, ಈಗ ಪ್ರಚಲಿತವಾಗಿರುವ ಭಕ್ತಿ ಒಂದು ಅವೈದಿಕತತ್ತ್ವವೇ-ಎಂದು ಹೇಳಿ ಬಿಡಬಹುದು. ಏಕೆಂದರೆ, ಈಗ ಸಾಧಾರಣವಾಗಿ ಭಗವಂತನಲ್ಲಿ ಭಕ್ತಿ ತೋರಿಸುವುದು–ಎಂದರೆ ಭಗವಂತನನ್ನು ಸಂತೋಷಪಡಿಸಲು ಮಾಡುವ ಯಾವಾವುದೋ ಕಾರ್ಯಕಲಾಪಗಳು ಎಂದೇ ತಿಳಿಯಲ್ಪಡುತ್ತದೆ. ಯಾರನ್ನಾದರೂ ಸಂತೋಷಪಡಿಸುವುದು, ಎಂಬುದರ ಅರ್ಥವೇನು? ಅವನಿಗೆ ಸಂತೋಷವಿಲ್ಲ;

ಇದ್ದರೂ ಸಾಕಷ್ಟಿಲ್ಲ—ಎಂದೇ ತಾನೇ? ಅಥವಾ, ಅವನಿಗೆ ಅಸಂತೋಷವುಂಟಾಗಿದೆ; ಅದನ್ನು ದೂರೀಕರಿಸುವುದಕ್ಕಾಗಿ ಏನೇನೋ ಮಾಡಬೇಕು-ಎಂದು ತಾನೇ? ಈ ಬಗೆಯ ಭಕ್ತಿ ಭಗವಂತನು ಪೂರ್ಣನಲ್ಲ; ಅವನಲ್ಲೇನೋ ಕೊರತೆಯಿದೆ; ಅದನ್ನು ತುಂಬಿಕೊಡಬೇಕು. ಹಾಗೆ ಮಾಡಿದರೆ ಮಾತ್ರ ಅವನು ನಮಗೆ ಒಳ್ಳೆಯದನ್ನು ಮಾಡುತ್ತಾನೆ. ಇಲ್ಲವಾದರೆ-ಕೇಡೆಸಗುತ್ತಾನೆ- ಎಂಬ ಅಸಂಸ್ಕೃತವಾದ ಭಾವನೆಯ ಮೇಲೆಯೇ ನಿಂತಿರುತ್ತದೆ. ಸ್ತುತಿಗೆ ಮತ್ತು ಪ್ರಾರ್ಥನೆಗೆ ಮರುಳಾಗುವ, ಉತ್ಕೋಚ (ಲಂಚ) ಕೊಟ್ಟರೆ- ಈಗ ಕಟ್ಟಿಕೊಳ್ಳುವ ಹರಕೆಗಳು, ಸಮರ್ಪಿಸುವ ಫಲ ಪತ್ರ-ಪುಷ್ಪ-ಧೂಪ ದೀಪ-ನೈವೇದ್ಯಾದಿಗಳು, ಶಯನೋತ್ಸವ-ರಥೋತ್ಸವಾದಿಗಳು ಇವೆಲ್ಲಾ ಒಂದು ಬಗೆಯ ಲಂಚವೇ ಎಂಬುದರಲ್ಲಿ ಸಂದೇಹವೇನು-ಕೆಲಸ ಮಾಡಿಕೊಡುವ ದೇವನನ್ನು ಪೂರ್ಣತೃಪ್ತ, ಪ್ರಾಪ್ತಸರ್ವಸ್ವ, ನಿತ್ಯಾನಂದ-ಎಂದು ತಿಳಿಯಲು ಸಾಧ್ಯವೇ ಇಲ್ಲ. ವಸ್ತುತಃ ಈ ಬಗೆಯ ಭಕ್ತಿ ಒಂದು ವೇಳೆ ಮಾನಾಪಮಾನಗಳಿಂದ ಮೇಲಿದ್ದ ಭಗವಂತನಿಗೆ ಅಪಮಾನ ಮಾಡಲು ಸಾಧ್ಯವಿದ್ದರೆ-ಭಗವದಪಮಾನವೇ ಹೊರತು, ಭಗವದಾರಾಧನೆಯಲ್ಲ.

ವೇದಗಳು ಅತಿ ಸ್ಪಷ್ಟವಾಗಿ **"ಸ್ವರ್ಯಸ್ಯ ಚ ಕೇವಲಂ ತಸ್ಮೈ ಜ್ಯೇಷ್ಠಾಯ ಬ್ರಹ್ಮಣೇ ನಮಃ ||"** [ಅಥರ್ವ ವೇದ:- ೧೦.೮.೧.] [ಯಸ್ಯ] ಯಾವನ [ಸ್ವಃ] ಆನಂದವು, [ಕೇವಲಂ] ನಿತ್ಯಪರಿಶುದ್ಧವೋ, ಅಮಿಶ್ರಿತವೋ, [ತಸ್ಮೈ] ಆ, [ಜ್ಯೇಷ್ಠಾಯ ಬ್ರಹ್ಮಣೇ] ಜ್ಯೇಷ್ಠ ಪರಮಾತ್ಮನಿಗೆ, [ನಮಃ] ನಮಸ್ಕಾರ." ಎಂದು ಹೇಳಿದೆ. ಪರಮಾತ್ಮನು ನಿತ್ಯ ಶುದ್ಧ ಬುದ್ಧಮುಕ್ತಸ್ವಭಾವದವನು. ಅವನ ಆನಂದ ಅಕ್ಷುಣ್ಣ, ಅವ್ಯಾಹತ, ಅಖಂಡ. ಯಾರಾದರೂ ಭಕ್ತಿ ತೋರುವುದರಿಂದ ಅವನ ಏಕರಸವಾದ ಆನಂದದಲ್ಲಿ ಒಂದು ಹನಿಯೂ ಹೆಚ್ಚುವಂತಿಲ್ಲ; ಯಾರಾದರೂ ಅವನನ್ನು ನಿಂದಿಸುವುದರಿಂದ, ಆನಂದದಲ್ಲಿ ಒಂದು ಬಿಂದು ಕಡಿಮೆಯಾಗುವಂತೆಯೂ ಇಲ್ಲ. ಹೀಗಿರುವಾಗ, ಈಗ ಭಕ್ತಿ ಎಂದು ತಿಳಿಯಲ್ಪಡುವ ತತ್ತ್ವ ಎಂದೆಂದಿಗೂ ವೇದಾನುಕೂಲವಾಗಲಾರದು.

ಭಕ್ತಿ-ಎಂಬ ಪದವನ್ನು ಸದ್ಯಕ್ಕೆ ಇಲ್ಲಿಯೇ ಬಿಡೋಣ. ವೈದಿಕ ಧರ್ಮದಲ್ಲಿ ಜ್ಞಾನಕ್ಕೆಂತೋ, ಕರ್ಮಕ್ಕೆಂತೋ, ಉಪಾಸನೆಗೂ ಅಂತೇ ಮಹತ್ತ್ವ ಕೊಡಲಾಗಿದೆ. ಆದರೆ-ವೈದಿಕ ಉಪಾಸನೆಯ ಉದ್ದೇಶ್ಯ ಭಗವಂತನನ್ನು ಸಂತೋಷಪಡಿಸುವುದಲ್ಲ; ತನ್ನ ಆತ್ಮನನ್ನು ಉದ್ಧಾರ ಮಾಡಿಕೊಳ್ಳುವುದು. ಈ ಉಪಾಸನೆ ಒಂದು ಆಂತರಿಕ ಕ್ರಿಯೆ. ಅದರ ಬಾಹ್ಯಸ್ವರೂಪ-ಭಗವಂತನ ಗುಣ ಕರ್ಮ-ಸ್ವಭಾವಗಳಿಗೆ ಅನುಸಾರ ತನ್ನ ಜೀವನವನ್ನು ತಿದ್ದಿಕೊಂಡು ಎಲ್ಲರೊಂದಿಗೂ ವ್ಯವಹರಿಸುವುದು. ಈ ಉಪಾಸನೆ, ಜ್ಞಾನ ಮತ್ತು ಕರ್ಮಗಳ ಸಹಚಾರಿಯೇ ಹೊರತು, ಯಾವ ಒಂದು ಸ್ವತಂತ್ರ ತತ್ತ್ವವೂ ಅಲ್ಲ. ವಸ್ತುತಃ, ವೈದಿಕ ಧರ್ಮದಲ್ಲಿ, ಪೂರ್ಣ ಆತ್ಮವಿಕಾಸವುಂಟಾಗಿ ಮೋಕ್ಷ ಲಭಿಸಬೇಕಾದರೆ, ಜ್ಞಾನ, ಕರ್ಮ, ಉಪಾಸನೆ-ಮೂರರ ಆಶ್ರಯವೂ ಅನಿವಾರ್ಯ-ಎಂದೇ ಹೇಳಿದೆ. ಈ ಮಂತ್ರವನ್ನೇ ನೋಡಿರಿ:

**ಉದುತ್ತಮಂ ವರುಣ ಪಾಶಮಸ್ಮ-**
**ದವಾಧಮಂ ವಿ ಮಧ್ಯಮಂ ಶ್ರಥಾಯ ।**

ಅಥಾ ವಯಮಾದಿತ್ಯ ವ್ರತೇ ತವಾ-
ನಾಗಸೋ ಅದಿತಯೇ ಸ್ಯಾಮ ॥ [ಋಗ್ವೇದ: ೧-೨೪-೧೫]

["ವರುಣ] ಓ ವರಣೀಯ ಪ್ರಭೋ! [ಅಸ್ಮತ್] ನಮ್ಮಿಂದ, [ಉತ್ತಮಂ ಪಾಶಂ] ಉತ್ತಮವಾದ ಪಾಶವನ್ನು, [ಉತ್ ಶ್ರಥಾಯ] ಮೇಲಕ್ಕೆಳೆದು ಹಾಕು. [ಅಧಮಂ] ಅಧಮ ಪಾಶವನ್ನು, [ಅವಶ್ರಥಾಯ] ಕೆಳಕ್ಕೆಳೆದು ಹಾಕು, [ಮಧ್ಯಮಂ] ಮಧ್ಯಮ ಪಾಶವನ್ನು, [ವಿಶ್ರಥಾಯ] ಸುತ್ತಲೂ ಎಳೆದು ಹಾಕು, [ಅಥ] ಆ ಮೇಲೆ. [ಆದಿತ್ಯ] ಓ ಅಖಂಡ ದೇವ! [ವಯಂ] ನಾವು, [ತವ ವ್ರತೇ] ನಿನ್ನ ವ್ರತದಲ್ಲಿ, [ಅನಾಗಸಃ] ನಿಷ್ಪಾಪರಾಗಿ, [ಅದಿತಯೇ ಸ್ಯಾಮ] ಅಖಂಡ ಮೋಕ್ಷಕ್ಕೆ ಅರ್ಹರಾಗೋಣ."

ಇಂತಹ ಒಂದು ಮಂತ್ರವೇ ಸಾಲದೇ ವೈದಿಕ ಧರ್ಮದ ಪರಿಪೂರ್ಣತೆಯನ್ನು ತೋರಿಸಲು? "ನಾವು ಜ್ಞಾನ ಮಾರ್ಗಿಗಳು"–ಎಂಬ ವೇದಾಂತಿಗಳು, "ನಾವು ಕರ್ಮಮಾರ್ಗಿಗಳು"–ಎಂಬ ಲೌಕಿಕರು, "ನಾವು ಭಕ್ತಿಮಾರ್ಗಿಗಳು" - ಎಂಬ ಪೂಜಾಪಾಠನಿರತರು— ಎಲ್ಲರೂ ವೈದಿಕ ಧರ್ಮದಿಂದ ಅತಿ ದೂರವೇ ಇದ್ದಾರೆ. ಏಕೆಂದರೆ–ಮಾನವನಿಗೆ ಮೂರು ಬಂಧನಗಳು ಬಿಗಿದುಕೊಂಡಿವೆ. ಒಂದು ಬುದ್ಧಿಗೆ ಸುತ್ತಿಕೊಂಡಿದೆ; ಒಂದು ಹೃದಯಕ್ಕೆ ಸುತ್ತಿಕೊಂಡಿದೆ; ಒಂದು ದೇಹಕ್ಕೆ ಸುತ್ತಿಕೊಂಡಿದೆ. ಈ ಮೂರು ಬಂಧನಗಳನ್ನೂ ಸಡಲಿಸಲು ಮೂರು ಸಾಧನಗಳು ಬೇಕಾಗಿವೆ. ಬುದ್ಧಿಯ ಬಂಧನ - ಎಂದರೆ ಅಜ್ಞಾನ; ಹೃದಯದ ಬಂಧನ-ಎಂದರೆ ಸಂಕುಚಿತ ಭಾವ; ದೇಹದ ಬಂಧನ-ಎಂದರೆ ಭೋಗಲಾಲಸೆ. ಈ ಮೂರನ್ನೂ ಸಡಲಿಸದೆ, ನಾವು ಭಗವಂತನ ವ್ರತವನ್ನು ಪಾಲಿಸಿ, ನಿಷ್ಪಾಪರಾಗಲು ಸಾಧ್ಯವಿಲ್ಲ. ಬುದ್ಧಿಯ ಬಂಧನ-ಅದನ್ನು ಮಂತ್ರ 'ಉತ್ತಮ ಪಾಶ' ಎಂದಿದೆ—ಜ್ಞಾನದಿಂದ ಕಡಿದು ಬೀಳುತ್ತದೆ; ಹೃದಯದ ಬಂಧನ - ಮಧ್ಯಮ ಬಂಧನ - ಉಪಾಸನೆಯಿಂದ ಸಡಿಲವಾಗುತ್ತದೆ. ದೇಹದ ಬಂಧನ - ಅಧಮ ಬಂಧನ - ಕರ್ಮದಿಂದ ಸಡಿಲವಾಗುತ್ತದೆ. ಸಡಿಲವಾಗುವ ಕ್ರಮವನ್ನೂ ನೋಡಿರಿ. ಜ್ಞಾನದಿಂದ ಬುದ್ಧಿಯ ಬಂಧನದ ['ಉತ್‌ಶ್ರಥನ'] ಎಂದರೆ ಮೇಲ್ಮುಖವಾದ ಸಡಲಿಕೆಯಾಗುತ್ತದೆ; ಎಂದರೆ, ಬುದ್ಧಿ - ಉನ್ನತೋನ್ನತ ತತ್ವಗಳ ಗ್ರಹಣಕ್ಕೆ ಸಾಮರ್ಥ್ಯ ಪಡೆಯುತ್ತದೆ. ಉಪಾಸನೆಯಿಂದ ಹೃದಯದ ಬಂಧನದ 'ವಿಶ್ರಥನ' ವಾಗುತ್ತದೆ; ಎಂದರೆ - ಸಂಕುಚಿತ ಭಾವನೆಗಳಳಿದು, ವಿಶಾಲವಾದ, ಎಲ್ಲರೂ ತನನಂತೆ-ಎಂಬ ಉದಾರತೆ ಹುಟ್ಟುತ್ತದೆ. ಕರ್ಮದಿಂದ ದೇಹ-ಬಂಧನದ 'ಅವಶ್ರಥನ' ವಾಗುತ್ತದೆ; ಎಂದರೆ ಭೋಗಲಾಲಸೆ ಹುಡಿಗೂಡುತ್ತದೆ. ಈ ಮೂರು ಬಂಧನಗಳಲ್ಲಿ ಯಾವುದು ಕಳಚಿ ಹೋಗದಿದ್ದರೂ ಪರಿಪೂರ್ಣ ಧರ್ಮದ ಪಾಲನೆಯಾಗ ವುದಿಲ್ಲ. ಜ್ಞಾನವಿಲ್ಲದೆ, ಉಪಾಸನೆ ಹಾಗೂ ಕರ್ಮದ ಸ್ವರೂಪಗಳೇ ತಿಳಿಯುವುದಿಲ್ಲ. ಉಪಾಸನೆಯಿಲ್ಲದೆ, ಜ್ಞಾನ-ಕರ್ಮಗಳು ಸ್ವಾರ್ಥ ಸಾಧನೆಗೆ ಸಾಧನಗಳಾಗುವುವು. ಕರ್ಮವಿಲ್ಲದೆ, ಜ್ಞಾನ-ಉಪಾಸನೆಗಳು ನಿರರ್ಥಕವಾಗಿ ಹೋಗುವುವು. ಇವು ಒಂದಕ್ಕೊಂದು ಪೂರಕ. ಮೂರೂ ಇದ್ದಾಗಲೆ ಬುದ್ಧಿ-ಹೃದಯ-ಕೈಕಾಲುಗಳು ಸ್ವಸ್ಥವಾಗಿರುವ ಆರೋಗ್ಯಶಾಲಿಯಾದ ಮನುಷ್ಯನಂತೆ, ಧರ್ಮವು ಪೂರ್ಣ ರೂಪದಲ್ಲಿ ಪ್ರಕಟವಾಗಿ ಆತ್ಮನ ಆರೋಗ್ಯಕ್ಕೆ - ಎಂದರೆ ಪಾಪರಹಿತತ್ವಕ್ಕೆ ನೆರವಾಗುವುದು.

ಆದುದರಿಂದ, ವೈದಿಕ ಉಪಾಸನೆ ಸದಾ ಜ್ಞಾನ-ಕರ್ಮಗಳ ಸಹಚಾರಿಯಾಗಿಯೇ

ನಡೆಯುವುದು. ಜ್ಞಾನದಿಂದ ಪರಮಾತ್ಮನ ಗುಣಕರ್ಮಸ್ವಭಾವಗಳನ್ನರಿತು, ಕರ್ಮದಿಂದ ಅದಕ್ಕನುಗುಣವಾದ ಬಾಳನ್ನು ರೂಢಿಸಿಕೊಂಡು, ಉಪಾಸನೆಯಿಂದ ಹೃದಯ ವೈಶಾಲ್ಯವನ್ನು ಸಾಧಿಸಿಕೊಳ್ಳುವವನೇ ವೈದಿಕ ಧರ್ಮದ ದೃಷ್ಟಿಯಲ್ಲಿ ನಿಜವಾದ ಉಪಾಸಕ. ಉಪಾಸನೆಯ ಉದ್ದೇಶ್ಯ ಆತ್ಮೋದ್ಧಾರ - ಎಂದು ಹೇಳಿಯೇ ಇದ್ದೇವೆ. ಆತ್ಮೋದ್ಧಾರಕ್ಕೆ ಸಾಧನವಾಗಿಯೇ ಸ್ತುತಿ, ಪ್ರಾರ್ಥನೆ ಮತ್ತು ಸಾಮೀಪ್ಯಾನುಭೂತಿ. ಈ ಕ್ರಮದಲ್ಲಿ ಉಪಾಸನೆ ಮಾಡಬೇಕೆಂದು ವೈದಿಕಧರ್ಮದ ವಿಧಾನವಿದೆ. ಭಗವಂತನ ಸ್ತುತಿಮಾಡುವುದು ಅವನನ್ನು ಉಬ್ಬಿಸುವುದಕ್ಕಲ್ಲ; ಗುಣವರ್ಣನದಿಂದ ಅವನಲ್ಲಿ ಪ್ರೀತಿ ಹುಟ್ಟುವುದಕ್ಕೆ ಮತ್ತು ಅವನ ಗುಣಗಣಗಳನ್ನು ರೂಢಿಸಿಕೊಳ್ಳಲು ಬೇಕಾದ ಜ್ಞಾನ ಹುಟ್ಟುವುದಕ್ಕೆ. ಪ್ರಾರ್ಥನೆ ಮಾಡುವುದು ಅವನ ದಯೆಯನ್ನು ಆಕರ್ಷಿಸುವುದಕ್ಕಲ್ಲ; ಹೃದಯದಲ್ಲಿ ವಿನಯಭಾವನೆ ಬೆಳಸಿಕೊಂಡು, ಅಹಂಕಾರವನ್ನು ಮರ್ದಿಸುವುದಕ್ಕೆ ಮತ್ತು ಆತ್ಮಬಲ ವರ್ಧಿಸುವುದಕ್ಕೆ. ಭಗವಂತನ ಸಾಮೀಪ್ಯಾನುಭವದಿಂದ, ಅಂದರೆ, ಅವನ ಸರ್ವವ್ಯಾಪಕತ್ವವನ್ನು ಅನುಭವಿಸುವುದರಿಂದ ಪಾಪಮಯ ವೃತ್ತಿಗಳೆಲ್ಲಾ ನಾಶವಾಗುವುವು. ಇದನ್ನೆಲ್ಲಾ ಸಾಧಿಸುವುದಕ್ಕಾಗಿ, ವೇದಗಳು ವಿಧಾನ ಮಾಡಿರುವುದು ದೈನಂದಿನ ಸಂಧ್ಯಾವಂದನೆ ಮತ್ತು ಅಗ್ನಿಹೋತ್ರ—ಈ ಎರಡು ಕ್ರಿಯೆಗಳನ್ನು. ಸಂಧ್ಯಾವಂದನೆ ಮತ್ತು ಅಗ್ನಿಹೋತ್ರಗಳ ಮಹತ್ವದ ಬಗ್ಗೆ ಹಿಂದೆ ಲೇಖನಗಳಲ್ಲಿ, ವಿಸ್ತಾರವಾಗಿ ವಿವರಿಸಲಾಗಿದೆ. ಈ ಲೇಖನದಲ್ಲಿ, ಉಪಾಸಕರ ಸ್ವರೂಪ ಹೇಗಿರುವುದು - ಎಂಬುದನ್ನು ಒಂದು ಮಂತ್ರದ ಮೂಲಕ ತಿಳಿದುಕೊಳ್ಳೋಣ:

**ತಂ ಶಗ್ಮಾಸೋ, ಅರುಷಾಸೋ ಅಶ್ವಾ**
**ಬೃಹಸ್ಪತಿಂ ಸಹವಾಹೋ ವಹಂತಿ ।**
**ಸಹಶ್ಚಿದ್ಯಸ್ಯ ನೀಡವತ್ಸಧಸ್ಥಂ ನಭೋ**
**ನ ರೂಪಮರುಷಂ ವಸಾನಾಃ ॥**

[ಋಗ್ವೇದ:- ೭-೯೭-೬]

"[ಯಸ್ಯ] ಯಾವನ, [ಸಧಸ್ಥಂ] ಉಪಾಸನೆಯು, [ನೀಡವತ್] ಗೂಡಿನಂತೆ, ಆಶ್ರಯಸ್ಥಾನದಂತೆ, [ಸಹಃಚಿತ್] ಬಲಪ್ರದವೇ ಆಗಿದೆಯೋ, [ತಂ] ಆ, [ಬೃಹಸ್ಪತಿಂ] ಮಹಾನ್ ಗ್ರಹೋಪಗ್ರಹಗಳ ಮತ್ತು ವೇದಗಳ ಸ್ವಾಮಿಯಾದ ಪರಮಾತ್ಮನನ್ನು, [ಅರುಷಂ] ನಿರ್ಮಲವಾದ, [ನಭಃನ] ಆಗಸದಂತಹ, [ರೂಪಂ] ಸ್ವಚವಾದ ಜೀವನವನ್ನು, [ವಸಾನಾಃ] ನಡೆಯಿಸುವ, [ಶಗ್ಮಾಸಃ] ಸದಾ ಹಸನ್ಮುಖರಾದ, [ಅರುಷಾಸಃ] ಈರ್ಷ್ಯಾದ್ವೇಷಕಾಮಕ್ರೋಧಾದಿ ದೋಷಗಳಿಂದ ರಹಿತರಾದ, [ಸಹವಾಹಃ] ಎಲ್ಲರೊಂದಿಗೆ ಕಲೆತು, ಬೆರೆತು, ಸಹಕಾರ ಭಾವದಿಂದ ಜೀವಿಸುವ, [ಅಶ್ವಾಃ] ಗತಿಯುಕ್ತರೂ, ಆಲಸ್ಯರಹಿತರೂ ಆದ ಮಾನವರು, [ವಹಂತಿ] ತಮ್ಮಲ್ಲಿಯೇ ಧರಿಸುತ್ತಾರೆ."

ನಿಜವಾದ ಉಪಾಸಕರ ಈ ಸ್ವರೂಪವನ್ನರಿತಮೇಲೆ, ಈಗಿನ ಬಣ್ಣ ಬಣ್ಣದ ಬಾಹ್ಯಾಡಂಬರ ಭರಿತವಾದ ಪೂಜೆ-ಭಜನೆ-ಅರ್ಚನೆಗಳೆಲ್ಲಾ ಪೂರ್ಣತಃ ಅವೈದಿಕ-ಎಂಬುದು ತಾನಾಗಿಯೇ ಅರ್ಥವಾಗದೇ? ನಮಗೆ ವೇದಗಳಲ್ಲಿ ಶ್ರದ್ಧೆ ಹುಟ್ಟಲು, ವೇದೋಕ್ತವಾದ ಉಪಾಸನಾಕ್ರಮವೂ ಒಂದು ಬಹುದೊಡ್ಡ ಕಾರಣವೆಂಬುದರಲ್ಲಿ ಸಂದೇಹವಿಲ್ಲ. ಬೇರೆ

ಪೂಜಾ ವಿಧಾನಗಳು ಆತ್ಮನನ್ನು ಭೌತಿಕ ಆಡಂಬರಗಳ ಕಡೆ ಎಳೆದು, ಅವನನ್ನು ಬಹಿರ್ಮುಖನನ್ನಾಗಿ ಮಾಡಿಬಿಡುತ್ತವೆ; ಆದರೆ - ವೈದಿಕ ಉಪಾಸನೆ ಆತ್ಮನನ್ನು ಒಳಮುಖನನ್ನಾಗಿ ಮಾಡಿ, ಒಳಗಿನಿಂದಲೇ ಅವನು ಬೆಳೆಯುವಂತೆ ಮಾಡಿ, ಅವನ ಪೂರ್ಣ ವಿಕಾಸಕ್ಕೆ ನೆರವಾಗುತ್ತದೆ. ಎಷ್ಟು ಚೆನ್ನಾಗಿ ಹೇಳುತ್ತಿದೆ, ವೇದಃ

**ತ್ವಂಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ತ್ಸತಾ ।**
**ಸಖಾ ಸಖ್ಯಾ ಸಮಿಧ್ಯಸೇ ॥**

[ಋಗ್ವೇದ: ೮-೪೩-೧೪]

[ಅಗ್ನೇ] ಓ ಜ್ಯೋತಿರ್ಮಯ! [ವಿಪ್ರಃ] ವಿಶೇಷ ಪ್ರಜ್ಞಾವಂತನೂ, [ಸನ್] ಸತ್ಯಮಯನೂ, [ಸಖಾ] ಸರ್ವರಿಗೂ ಮಿತ್ರನೂ ಆದ, [ತ್ವಂ] ನೀನು, [ಅಗ್ನಿನಾ] ಜ್ಯೋತಿರ್ಮಯನೂ, [ವಿಪ್ರೇಣ] ವಿಶೇಷ ಪ್ರಜ್ಞಾವಂತನೂ, [ಸತಾ] ಸತ್ಯಮಯನೂ, [ಸಖ್ಯಾ] ಸರ್ವರೊಂದಿಗೂ ಮೈತ್ರೀಭಾವ ಹೊಂದಿರುವವನೂ ಆದವನಿಂದಲೇ, [ಸಮಿಧ್ಯಸೇ] ಪ್ರಕಾಶಿಸಲ್ಪಡುತ್ತೀಯೆ." ನಿಜ; ಗುಣಸಾದೃಶ್ಯವಿಲ್ಲದ, [ಉಪಾಸ್ಯ] ಉಪಾಸಕರ ಸಂಬಂಧವೇ ನೇರವಾಗದು. ತೇಜಸ್ವಿಯೂ, ಜ್ಞಾನಿಯೂ, ಸತ್ಯಸ್ವರೂಪನೂ, ಜೀವಮಾತ್ರರ ಮಿತ್ರನೂ ಆದ ಪರಮಾತ್ಮನಿಗೆ, ಕತ್ತಲ ಮುದ್ದೆಯೂ, ಅಜ್ಞಾನಿಯೂ, ಅಸತ್ಯಮಯವಾದ ಆಚಾರ ವಿಚಾರಗಳಲ್ಲಿ ಲೀನನಾಗಿರುವವನೂ, ರಾಗದ್ವೇಷಗಳಿಂದ ಉರಿದುರಿದು ಬೀಳುತ್ತಿರುವವನೂ ಆದ ಮಾನವನು ಉಪಾಸಕ ನೆನಿಸಲಾರನು. ಆದುದರಿಂದ, ಪರಮಾತ್ಮನಂತೆಯೇ ಸದ್ಗುಣ ಮಂಡಿತನಾದವನೇ ಪ್ರಭೂಪಾಸಕ; ಅವನಿಂದಲೇ ಪರಮಾತ್ಮನ ಅಸ್ತಿತ್ವದ ಮೇಲೆ ಬೆಳಕು ಬಿದ್ದೀತು—ಎನ್ನುತ್ತಿದೆ ವೇದ! ಎಷ್ಟು ಸತ್ಯ! ಎಷ್ಟು ಶಿವ!! ಎಷ್ಟು ಸುಂದರ!!! ನಮಸ್ತೇ ವೇದಮಾತಾ! ನಮಸ್ತೇ.

---

## ನಿಜವಾದ ತಂದೆಯನ್ನು ತೋರಿಸಬಲ್ಲ ಮಾತೆ

ಪ್ರಪಂಚದಲ್ಲಿ ಮಾತೆಯ ಸ್ಥಾನದೆಷ್ಟು ಹಿರಿದಾದ ಸ್ಥಾನ ಬೇರೊಂದಿಲ್ಲ. ಆದರೆ ಮಾನವನು ಇಷ್ಟೊಂದು ಹಿರಿದಾದ ಸ್ಥಾನವನ್ನು ಅಲಂಕರಿಸಿದ ಮಾತೆ ಯಾರೆಂಬುದನ್ನು ಇನ್ನೂ ಸರಿಯಾಗಿ ತಿಳಿದಿಲ್ಲ. ಎಷ್ಟರ ವರೆಗೆ ತನ್ನ ನಿಜವಾದ ಮಾತೆ ಯಾರೆಂಬುದನ್ನು ಮಾನವ ಸಮುದಾಯವು ಅರಿಯುವುದಿಲ್ಲವೋ ಅಷ್ಟರ ತನಕ ಕಷ್ಟಗಳು ತಪ್ಪಿದ್ದಲ್ಲ. ತನ್ನ ಸರ್ವತೋಮುಖ ಅಭಿವೃದ್ಧಿಗೆ ಕಾರಣಳಾದ, ತನ್ನನ್ನು ನಿಜವಾದ ಮಾನವನೆಂದೂ, ಆದರ್ಶ ಮಾನವನೆಂದೂ ಕರೆಯಲ್ಪಡುವಷ್ಟು ಸ್ಥಾನಮಾನಗಳಿಗೆ ಅನುಕೂಲತೆ ಒದಗಿಸಿಕೊಟ್ಟು ಜ್ಞಾನಾಮೃತ ಸುಧೆಯನ್ನು ಪಾನಮಾಡಿಸಿದ ಆ ದಿವ್ಯಮಾತೆಯನ್ನು ಮಾನವನು ನಿರ್ಲಕ್ಷಿಸಿ, 'ಮಾತೃದ್ರೋಹಿ' ಎಂಬ ಹೆಸರಿಗೆ ಭೂಷಣ ಪ್ರಾಯನಾಗಿದ್ದಾನೆ. ಇನ್ನು ಮುಂದಾದರೂ ಮಾನವ ಸಮುದಾಯವು ತನ್ನ ಮಾತೆ ಯಾರೆಂಬುದನ್ನು ನಿಜವಾಗಿ ಅರಿಯಲಿ ಎಂಬುದಕ್ಕಾಗಿ ಈ ಲೇಖನವನ್ನು ನಮ್ಮ ವಾಚಕರಿಗಾಗಿ ಪ್ರಕಟಿಸುತ್ತಿದ್ದೇವೆ.

ಸರ್ವಸಾಮಾನ್ಯವಾಗಿ ಮಾನವ ಸಮುದಾಯಕ್ಕೆ ಅನೇಕ ತಾಯಂದಿರಿದ್ದಾರೆ. ಮೊದಲನೆಯದಾಗಿ ಜನ್ಮದಾತೆಯಾದ ಹೆತ್ತ ತಾಯಿ. ಆ ಮೇಲೆ ಭೂಮಾತೆಯಾದ ಹೊತ್ತ ತಾಯಿ; ನಂತರ ಸಾಕುತಾಯಿ; ಮುಂದುವರಿಯುತ್ತಾ ಚಿಕ್ಕತಾಯಿ, ದೊಡ್ಡತಾಯಿ, ಮಲತಾಯಿ ಮತ್ತು ವೇದಿಕೆಯಲ್ಲಿ ನಿಂತು 'ಮಾತೆಯರೇ' ಎಂದು ಸಂಬೋಧಿಸಲ್ಪಡುವ ಹಲವಾರು ಮಾತೆಯರೂ ಇದ್ದಾರೆ. ವಾಸ್ತವವಾಗಿ ಎಲ್ಲಾ ಮಾತೆಯರೂ ತಾತ್ಕಾಲಿಕವೆನ್ನಬಹುದು. ಆದರೆ ನನಗೀಗ ಬೇಕಾದುದು ನೈಜಮಾತೆ ಯಾರೆಂಬುದೇ ಆಗಿದೆ.

ಮಾನವನು ಯೋಚಿಸತಕ್ಕ ವಿಷಯವಿದು! ತಾನು ಎಲ್ಲಿಂದ ಬಂದೆ, ಹೇಗೆ ಬಂದೆ, ಏತಕ್ಕಾಗಿ ಬಂದೆ, ಎಲ್ಲಿಗೆ ಹೋಗುವೆ, ನನ್ನ ನಿರ್ದಿಷ್ಟವಾದ ಗುರಿಯಾವುದು? 'ಹುಟ್ಟು' ಎಂದು ಕರೆಯಲ್ಪಡುವದಕ್ಕಿಂತ ಮುಂಚೆ ನಾನು ಏನಾಗಿದ್ದೆ? 'ಸಾವು' ಎಂದು ಕರೆಯಲ್ಪಡುವ ನಂತರ ನಾನು ಏನಾಗಿ, ಎಲ್ಲಿಗೆ ಹೋಗುವೆ? ಈ ಮಧ್ಯಾವಧಿ ಕಾಲದಲ್ಲಿ ನಾನು ಸಾಧಿಸತಕ್ಕದ್ದೇನಿದೆ? ಯಾರಿಗಾಗಿ ಮತ್ತು ಏತಕ್ಕಾಗಿ? ನನ್ನ ಸುತ್ತಲೂ ಆವರಿಸಿರುವ ಈ ಜಗತ್ತಿನ ನಿರ್ಮಾಣ ಹೇಗಾಯಿತು? ಏತರಿಂದ ಮತ್ತು ಏತಕ್ಕಾಗಿ ಆಯಿತು? ನನಗೂ ಈ ಜಗತ್ತಿಗೂ ಇರುವ ಸಂಬಂಧವೇನು? ನಾನು ಹುಟ್ಟುವ ಮುಂಚೆ ಈ ಜಗತ್ತು ಇತ್ತೇ? ಇದ್ದರೆ ಹೇಗಿತ್ತು? ಮುಂದೆ ರೂಪಾಂತರಗೊಳ್ಳುವುದೇ? ನಾಶವಾಗುವುದೇ? ಈ ವೈವಿಧ್ಯಮಯ ಸೃಷ್ಟಿಯ ಔಚಿತ್ಯವೇನು? ಇದರ ರಚನೆಗೆ ಸರ್ವನಿಯಾಮಕನಾದ ಕರ್ತನಿರುವನೇ? ಇರುವುದಾದರೆ ಹೇಗಿರುವನು ಅಥವಾ ಹೀಗೆಯೇ ಇದ್ದಾನೆ—ಎಂದು ನಿರ್ದಿಷ್ಟವಾಗಿ ತಿಳಿಸಬಲ್ಲ ನಮ್ಮೆಲ್ಲರ ತಾಯಿ ಯಾರು?

ಸರ್ವಸಾಮಾನ್ಯವಾಗಿ ನಾವು ಯಾರನ್ನು ತಾಯಿಯೆಂದು ಸಂಬೋಧಿಸುವೆವೋ ಅವಳು ಇದನ್ನೆಲ್ಲಾ ತಿಳಿಸಬಲ್ಲಳೇ? ಯಾರಿಂದ ನಾವು ಇದನ್ನೆಲ್ಲಾ ತಿಳಿದುಕೊಳ್ಳಬೇಕು?— ಎಂಬ ಪ್ರಶ್ನೆಗಳ ಮಾಲೆ ಉದ್ಭವಿಸಿದಾಗ ನಮ್ಮ ದೃಷ್ಟಿಗೆ ಬೀಳುವ ನಿಜವಾದ ಮಾತೆಯೆಂದರೆ, ವೇದಮಾತೆಯೊಬ್ಬಳಲ್ಲದೆ ಬೇರೆ ಯಾರೂ ಇಲ್ಲ—ಎಂದು ಖಂಡಿತವಾಗಿ ಹೇಳಬಹುದು. ಅದನ್ನೇ ಅಥರ್ವವೇದ, **"ಸ್ತುತಾ ಮಯಾ ವರದಾ ವೇದಮಾತಾ"** "ಪರಮ ಮಂಗಳೆಯಾದ, ವರದಾಯಿನೀ ವೇದಮಾತೆಯನ್ನು ಸ್ತುತಿಸುತ್ತೇನೆ". ಎಂದು ವೇದಗಳನ್ನೇ ಮಾತೆಯೆಂದು ನಿರ್ದೇಶಿಸಿ ಹೇಳುತ್ತಿದೆ.

ಈಗ ಸಾಮಾಜಿಕನಾಗಿ ಮಾತೆಯ ಪರಿಚಯ ಮಾಡಿಕೊಳ್ಳೋಣ. ಎಂಭತ್ತನಾಲ್ಕು ಲಕ್ಷ ಯೋನಿಗಳಿಂದ ಪ್ರತ್ಯೇಕಿಸಲ್ಪಟ್ಟ ವಿಶಿಷ್ಟ ರೀತಿಯ ಪ್ರಾಣಿಯಾದ ಮಾನವನು ಚಿಕ್ಕ ಮಗುವಾಗಿರುವಾಗ ತನ್ನ ತಾಯಿಯು, ಯಾವನನ್ನು ನಿರ್ದೇಶಿಸಿ, 'ಇವನೇ ನಿನ್ನ ತಂದೆ' ಎಂದು ಬೆರಳು ತೋರಿಸಿ ಅರಿವು ಮಾಡಿಕೊಡುತ್ತಾಳೋ, ಅವನನ್ನೇ ತಂದೆಯೆಂದು ಸಂಬೋಧಿಸುತ್ತಾ ಬರುತ್ತಾನೆ ಅಂದರೆ ಮಾನವನಿಗೆ ತನ್ನ ತಂದೆಯ ಪರಿಚಯ ಮಾತೆಯ ಮೂಲಕವೇ ಆಗಬೇಕೆಂದಾಯಿತು. ಅದೇ ರೀತಿ ತನ್ನ ಮಗುವಿನ ತಂದೆ ಯಾರೆಂಬುದರ ಅರಿವು ತಾಯಿಗೆ ಸ್ಪಷ್ಟವಾಗಿರಲೇ ಬೇಕಷ್ಟೆ? ಯಾವ ಮಾತೆ ಸ್ವತಃ ಪತಿವ್ರತೆಯಾಗಿರುವಳೋ ಅವಳೇ 'ಮಾತೃದೇವೋ ಭವ' ಎಂಬ ಗೌರವಕ್ಕೆ ಪಾತ್ರಳಾಗುವಳು.

ಪರಮಾತ್ಮನಿಂದ ರಚಿಸಲ್ಪಟ್ಟ ಈ ಜಗತ್ತಿನಲ್ಲಿ ಮೈಥುನ ಸೃಷ್ಟಿ ಪ್ರಾರಂಭವಾದಂದಿ

ನಿಂದ ಮಾನವನು ಮಾತೃಗರ್ಭದಿಂದಲೇ ಜನ್ಮವೆತ್ತಿ ಬಂದಿದ್ದಾನೆ, ಅದನ್ನೇ ಪ್ರಸವವೆನ್ನುವರು. ಈ ರೀತಿ ಪ್ರಸವಿಸುವುದು ಸ್ತ್ರೀ ಸಹಜವಾದ ಗುಣವಾದ್ದರಿಂದ ಅವಳು ಮಗುವಿಗೆ ತಾಯಾಗಬಲ್ಲಳು. **'ಮಾತೃದೇವೋ ಭವ'**ವೆಂದು ಹೇಳಲ್ಪಡುವ ದೇವತಾ ಸ್ವರೂಪಿಣಿಯಾದ ಮಾತೆಯಾಗಲಾರಳು. ಆ ಸ್ಥಾನವನ್ನು ಅವಳು ಗಳಿಸಬೇಕಾದರೆ **'ಪಿತೃದೇವೋ ಭವ'**ವೆಂದು ಹೇಳಲ್ಪಡುವ ತಾನು ಪ್ರಸವಿಸುವ ಮಗುವಿನ ಪಿತನಾರೆಂದು ಅವಳು ತಿಳಿದಿರಬೇಕು.

ಮೇಲಿನ ವಿಷಯಗಳು ತೋರುವಿಕೆಗೆ ಬಹಳ ಸರಳವೆನಿಸಿದರೂ ಅತ್ಯಂತ ಗಹನವಾದುದೆನ್ನಬಹುದು. ಬಹುಮಂದಿ ಸ್ತ್ರೀಯರಿಗೆ ತಾಯಿ ಮತ್ತು ಮಾತೆಯ ವ್ಯತ್ಯಾಸ ತಿಳಿದಿರಲಿಕ್ಕಿಲ್ಲ. ಇದನ್ನು ಎರಡು ವಿಭಾಗವಾಗಿ ವಾಚಕರಿಗೆ ತಿಳಿಸುವುದು ಆಗತ್ಯವಾಗಿದೆ. ಮೊದಲನೆಯದಾಗಿ ಮಾತೆಯೆಂದು ಕರೆಯಲ್ಪಡುವ ಸ್ತ್ರೀಯ ಗುಣ ವಿಶಿಷ್ಟತೆಗಳೇನೆಂದು ನೋಡೋಣ. ಸಮಾನ ವರ್ಣಸ್ಥ ಅಥವಾ ಉತ್ತಮ ವರ್ಣಸ್ಥನಾದ ತನ್ನ ಗುಣಕರ್ಮ ಸ್ವಭಾವಕ್ಕನುಕೂಲವಾದ ಪುರುಷನನ್ನು ಅಗ್ನಿಸಾಕ್ಷಿಯಾಗಿ ವಿವಾಹ ಮಾಡಿಕೊಂಡು ಕಾಯಾ ವಾಚಾ ಮನಸಾ 'ಇವನೇ ತನ್ನ ಪತಿ'ಯೆಂದು ಶ್ರದ್ಧೆಯಿಂದ ನಂಬಿಕೊಂಡು ಬಂದ ಪತಿವ್ರತೆಯಾದ ಸ್ತ್ರೀಯು ತನ್ನಲ್ಲಿ ಹುಟ್ಟಿದ ಮಗು ಯಾರು ಮತ್ತು ಯಾವನಿಂದ ನಿರ್ಮಾಣವಾಯಿತೆಂದು ಸ್ವತಃ ಬಲ್ಲವಳಾಗಿದ್ದು, ನಿರ್ದಿಷ್ಟವಾಗಿ ಹೇಳಲೂ ಸಮರ್ಥಳು. ಇಂತಹ ಸ್ತ್ರೀಯಲ್ಲಿ ಹುಟ್ಟಿದ ಸಂತಾನವನ್ನು ಶಾಸ್ತ್ರಗಳಲ್ಲಿ ಸುಪುತ್ರ ಅಥವಾ ಸುಪುತ್ರಿಯೆಂದು ಹೇಳಲಾಗಿದೆ. ಇಂತಹ ಮಕ್ಕಳು ತಾವೂ ಬೆಳಗಿ ತಮ್ಮ ಮಾತಾಪಿತೃಗಳನ್ನು ಬೆಳಗಿಸುವವರಾಗಿರುತ್ತಾರೆ.

ಈಗ ಎರಡನೆಯದಾದ ತಾಯಿಯೆಂದು ಕರೆಯಲ್ಪಡುವ ಸ್ತ್ರೀಯ ವಿಷಯವನ್ನು ಸ್ವಲ್ಪ ತಿಳಿಯೋಣ. ಪ್ರಚಲಿತ ನಮಗೆ ಕಾಣಲು ಸಿಗುವ ಅನೇಕ ಸ್ತ್ರೀಯರು ಇಂಥವರೇ ಆಗಿದ್ದಾರೆ. ಇದನ್ನು ಮೂರು ತರಗತಿಗಳಲ್ಲಿ ವಿಂಗಡಿಸಬಹುದು. a) ತಾರುಣ್ಯದ ಭರದಿಂದ ಯಾವನಲ್ಲಿಯೋ ಅನುರಕ್ತಳಾಗಿ ಕಾಮ ಪ್ರವೃತ್ತಿಯಿಂದ ಬೆಳೆಸಿಕೊಂಡ ಪಿಂಡವನ್ನು ಇಳಿಸಿಕೊಳ್ಳುವ ಸಲುವಾಗಿ ಆಸ್ಪತ್ರೆಗೆ ಬಂದವರು. ಸುಳ್ಳು ಹೆಸರಿನಿಂದ ದಾಖಲಾತಿ ಮಾಡಿಕೊಂಡು ಪ್ರಸವವಾದ ಎರಡು-ಮೂರು ದಿನಗಳಲ್ಲಿ ತನ್ನ ಪಾಪದ ಪಿಂಡವನ್ನು ಅಲ್ಲಿಯೇ ಬಿಟ್ಟು ತಲೆಮರೆಸಿ ಓಡಿಹೋಗುವ ತಾಯಂದಿರು ಹಲವಾರು. b) ಕಾಮಪಿಪಾಸೆಗೆ ಬಲಿಯಾಗಿ ಗುಪ್ತವ್ಯವಹಾರದಲ್ಲಿ ಬಿದ್ದು ಅದರ ಫಲವಾಗಿ ಪ್ರಾಪ್ತಿಸಿಕೊಂಡ ಗರ್ಭವನ್ನು ನೀಗಿಸಿಕೊಳ್ಳಲಾಗದೆ ಎಲ್ಲಿಯೋ ಪ್ರಸವವಾಗಿ ತನ್ನ ಪಾಪದ ಪಿಂಡವನ್ನು ಬಾವಿಗೋ, ಕೆರೆಗೋ, ಚರಂಡಿಗೋ ಎಸೆದು ಅಥವಾ ಪ್ರಸವವಾದೊಡನೆಯೇ ಕತ್ತು ಹಿಸುಕಿ ಕೊಂದು ಸಮಾಜದ ಮುಂದೆ ಮುಖವೆತ್ತಿ ತಿರುಗಬೇಕೆಂಬ ಇಚ್ಛೆ ಉಳ್ಳವಳಾಗಿ, ಮಗುವಿನ ತಾಯಿಯಾಗುವವರೂ ಕೆಲವರಿದ್ದಾರೆ. ಈ ಎರಡೂ ವಿಭಾಗದವರಿಗೆ ತಮ್ಮ ಪ್ರಿಯತಮನಾರೆಂದು ಗೊತ್ತು. ಆದರೆ ಸಮಾಜದ ಮುಂದೆ ತಾನು ತಾಯಿಯಾಗಿದ್ದೇನೆಂದು ಹೇಳಲು ಅಸಮರ್ಥರು. c) ಈ ವರ್ಗದವರು ವೇಶ್ಯಾವಾಟಿಕೆಯಲ್ಲಿ ಬೆಳೆದು ಪ್ರಾಯಸಮರ್ಥರಾಗುತ್ತಲೇ ಅನೇಕ ಪುರುಷರ ಸಹವಾಸದಿಂದ ದೇಶ ಕಾಲ ವರ್ತಮಾನ ಪರಿಸ್ಥಿತಿಗಳನ್ನು ಬದಿಗೊತ್ತಿ, ಕೇವಲ ವಿಷಯವಾಸನೆಯಲ್ಲಿಯೇ ಜೀವನ ನಿರ್ವಹಿಸಿಕೊಳ್ಳುತ್ತಿರುವಾಗ ಅನೇಕರು ತಾಯಿಯಾಗುವುದುಂಟು.

ಬೇರೆ ಸ್ತ್ರೀಯರಂತೆ ಇವರೂ ಪ್ರಸವವಾಗುತ್ತಾರೆ ನಿಜ. ಹುಟ್ಟಿದ ಮಗುವಿನ ತಂದೆ ಯಾರೆಂದು ನಿರ್ದಿಷ್ಟವಾಗಿ ಹೇಳಲಾರರು. ಅವರಿಗೆ ಹುಟ್ಟಿದ ಮಕ್ಕಳು ಬೆಳೆದು ಬರುವಾಗ ಹೆಣ್ಣಾದರೆ ಅದೇ ಕೊಳಚೆಯಲ್ಲೇ ಬಿದ್ದಿರಬೇಕಾಗುವುದು. ಗಂಡಾದರೆ ತನ್ನ ವ್ಯಾಸಂಗ ಪೂರ್ತಿಗಾಗಿ ಮುಂದುವರಿಯುವಾಗ ತನ್ನ ತಂದೆ ಯಾರೆಂದು ಹೇಳಲಾರ. ತಾಯಿಯ ವಿಷಯವನ್ನು ಹೇಳಲು ನಾಚಿಕೆ, ತಾಯಿಗೂ ಅದೇ ಗತಿ. ಸಮಾಜದ ಮುಂದೆ ಗೌರವ ಪೂರ್ವಕವಾಗಿ ಬಹಿರಂಗವಾಗಿ ಹೇಳಲಾರಳು. ಈ ವರ್ಗದವರೆಲ್ಲಾ ಕೇವಲ ತಾಯಿಯಾಗ ಬಲ್ಲರು. ಆದರೆ ಮಾತೆಯಾಗಲಾರರು. ಇದರಿಂದ ತಾಯಿ ಮತ್ತು ಮಾತೆಯ ನಿಜಸ್ವರೂಪ ವೇನೆಂದು ವಾಚಕರಿಗೆ ಅರಿವಾಗಿರಬಹುದು. ಇದಕ್ಕೆ ಆಧಾರವಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ಬರುವ ಈ ಕಥೆಯನ್ನು ಇಲ್ಲಿ ಕೊಡಲಾಗಿದೆ.

ಜಬಾಲೆಯ ಮಗನಾದ ಸತ್ಯಕಾಮನು ತನ್ನ ಮಾತೆಯನ್ನು ಈ ರೀತಿ ಕೇಳಿದನು. "ಹೇ ಪೂಜ್ಯಳಾದ ಮಾತೆಯೇ! ನಾನು ಬ್ರಹ್ಮಚರ್ಯವನ್ನು ಧಾರಣೆ ಮಾಡುತ್ತೇನೆ ಅರ್ಥಾತ್ ಬ್ರಹ್ಮಚಾರಿಯಾಗಿ ಗುರುವಿನ ಬಳಿಗೆ ಅಧ್ಯಯನಕ್ಕಾಗಿ ತೆರಳುತ್ತೇನೆ. ಆದ್ದರಿಂದ ನನ್ನ ಗೋತ್ರ ಯಾವುದು ಎಂದು ತಿಳಿಸುವವಳಾಗು.'

ತಾಯಿ ಜಬಾಲೆಯು ಮಗನಿಗೆ ಹೇಳಿದಳು:–"ವತ್ಸ! ನೀನು ಯಾವ ಗೋತ್ರೋತ್ಪನ್ನನೆಂದು ನಾನರಿಯೆ. ಅನೇಕ ಸ್ಥಳಗಳಲ್ಲಿ ಸೇವಕಿಯಾಗಿ ದುಡಿಯುತ್ತಿದ್ದಾಗ ಯೌವನ ದಲ್ಲಿ ನಿನ್ನನ್ನು ಪಡೆದೆ. ಆದುದರಿಂದ ನೀನು ಯಾವ ಗೋತ್ರದವನು ಎಂಬುದು ನನಗೆ ತಿಳಿಯದು. ನನ್ನ ಹೆಸರು ಜಬಾಲಾ ಮತ್ತು ಸತ್ಯಕಾಮನೆಂಬುದು ನಿನ್ನ ಹೆಸರು. ಗುರುಗಳು ಕೇಳಿದಾಗ 'ನಾನು ಸತ್ಯಕಾಮ ಜಾಬಾಲ'ನೆಂದೇ ಹೇಳು."

ಆಗ ಸತ್ಯಕಾಮನು ಹರಿದ್ರುಮಾನ್ ಋಷಿಯ ಮಗನಾದ ಗೌತಮರ ಬಳಿ ಹೋಗಿ ಈ ರೀತಿ ಹೇಳಿದನು:–"ಭಗವನ್! ನಾನು ತಮ್ಮ ಬಳಿ ಬ್ರಹ್ಮಚರ್ಯ ವ್ರತಧಾರಿಯಾಗಿ ಇರ ಬಯಸುತ್ತೇನೆ. ಈ ಕಾರಣದಿಂದ ತಮ್ಮ ಬಳಿಗೆ ಬಂದಿದ್ದೇನೆ."

ಆಗ ಗೌತಮರು ಸತ್ಯಕಾಮನನ್ನು ಕೇಳಿದರು:—"ಮಗೂ! ನಿನ್ನ ಗೋತ್ರ ಯಾವುದು?" ಸತ್ಯಕಾಮನಿಂತೆಂದ–"ಹೇ ಭಗವನ್! ನನ್ನ ಗೋತ್ರ ಯಾವುದೆಂಬುದನ್ನು ನಾನರಿಯೆ. ಈ ಬಗ್ಗೆ ನನ್ನ ತಾಯಿಯನ್ನು ಕೇಳಿದಾಗ ಆಕೆಯು – 'ಮಗೂ! ಅನೇಕ ಕಡೆಗಳಲ್ಲಿ ಪರಿಚಾರಿಕೆಯಾಗಿದ್ದಾಗ ಯೌವನದಲ್ಲಿ ನಿನ್ನನ್ನು ಪಡೆದೆ. ಜಬಾಲಾ ನನ್ನ ಹೆಸರು, 'ಸತ್ಯಕಾಮ' ಎಂಬುದು ನಿನ್ನ ಹೆಸರು. ಆದುದರಿಂದ ಸತ್ಯಕಾಮ ಜಾಬಾಲನೆಂದು ಗುರುಗಳಿಗೆ ಹೇಳು'—ಎಂದಳು. ಹೀಗಾಗಿ ನಾನು ಸತ್ಯಕಾಮ ಜಾಬಾಲನಾಗಿದ್ದೇನೆ''.

ಇದನ್ನು ಕೇಳಿ ಗೌತಮರು ಇಂತೆಂದರು–"ಅಬ್ರಾಹ್ಮಣ (ಅಜ್ಞಾನಿ)ನು ಈ ರೀತಿ ಸತ್ಯಕಥನವನ್ನು ಮಾಡಲಾರನು. ಆದುದರಿಂದ ನೀನು ಬ್ರಾಹ್ಮಣನೇ ಹೌದು. ಸಮಿತ್ತುಗಳನ್ನು ತೆಗೆದುಕೊಂಡು ಬಾ. ನಿನಗೆ ಉಪನಯನ ಸಂಸ್ಕಾರ ಮಾಡುತ್ತೇನೆ. ನೀನು ಸತ್ಯವನ್ನು ಬಿಟ್ಟವನಲ್ಲ" ಈ ರೀತಿ ಹೇಳಿ ಅವನಿಗೆ ಉಪನಯನವನ್ನು ಮಾಡಿದರು. ನಂತರ ಬ್ರಹ್ಮಚರ್ಯದಿಂದ ಅನೇಕ ಸಾಧನಗಳ ಮೂಲಕ ವೈದಿಕ ಸಿದ್ಧಾಂತಗಳ ಗಹನವಾದ ವಿಚಾರಗಳನ್ನು ಸತ್ಯಕಾಮನಿಗೆ ತಿಳಿಯಪಡಿಸಿದರು.

ಪ್ರಿಯ ವಾಚಕರೇ! ವೇದಮಾತೆಯ ವಿಷಯವಾಗಿ ಬರೆಯುತ್ತಿರುವಾಗ ಅಪ್ರಾಸಂಗಿಕವಾಗಿ ಈ ವಿಷಯವೇಕೆ ಬಂತು? ಎಂಬ ವಿಚಾರ ತಮ್ಮಲ್ಲಿ ವಿಶೇಷವಾಗಿ ಮೂಡಬಹುದು— ನಿಜ. ಆದರೆ ಇದಕ್ಕೆ ಮಹತ್ತರ ಕಾರಣವೊಂದಿದೆ. ಮುಂದೆ ಬರತಕ್ಕ ವಿಚಾರಗಳಿಗೆ ಸ್ಫುಟವಾಗಿ ನಿರ್ದೇಶಿಸಬಹುದಾದ ಉದಾಹರಣೆಯನ್ನು ಕೊಡಲೋಸುಗ ಮೇಲಿನ ವಿಷಯಗಳನ್ನು ವಿಸ್ತರಿಸಬೇಕಾಯಿತು. ಸಾಮಾಜಿಕವಾಗಿ ಎರಡು ವಿಧವಾದ ಮಾತೆಯರ ವಿಷಯವನ್ನು ತಿಳಿದಿರಿ. ಈಗ ಆಧ್ಯಾತ್ಮಿಕವಾಗಿ ನಾವು ತಿಳಿಯುವಾಗಲೂ ಈ ಎರಡು ವಿಧವಾದ ಮಾತೆಯರು ಕಾಣಸಿಗುವರು. ಅದನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು.

---

# ಮಾನವ ಧರ್ಮಕ್ಕಾಗಿ ಬಾರಿಸುತ್ತಿದೆ-ಕಾಲದ ಗಂಟೆ

● ಶ್ರೀ ಎ. ಶ್ರೀಪತಿ ಆಚಾರ್ಯ

**ಮೌಲ್ಯಗಳ ನೆಲೆ ಬೆಲೆ :**

ಯಾವುದೇ ಸಂಸ್ಕೃತಿಯು ಮಾನವ ಸಮಾಜಕ್ಕೆ ನೀಡುವ ಶ್ರೇಷ್ಠತಮ ಕೊಡುಗೆಗಳೆಂದರೆ ಮೌಲ್ಯಗಳು, ಆದರ್ಶಗಳು. ಆದರೆ ಇಂದಿನ ವಿದ್ಯಮಾನದಲ್ಲಿ ಇವು ಯಾವುವೂ ಪಾರದರ್ಶಕವಾಗಿಯಾದರೂ ಗೋಚರವಾಗುವುದು ವಿರಳತರವಾಗಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಮೌಲ್ಯಗಳು ಆದರ್ಶಗಳು ನೆಲೆ ಬೆಲೆ ಇಲ್ಲದವುಗಳು ಎಂಬ ಸಿದ್ಧಾಂತಕ್ಕೆ ಅನೇಕ ಆಧುನಿಕರು ಬಂದಂತಿದೆ. ಈ ಶಬ್ದಗಳು ಚೆನ್ನಾಗಿ ದುಡಿಸಿಕೊಳ್ಳುತ್ತಿರುವ ಆಷಾಢಭೂತಿತನವನ್ನು ಸಮಾಜದಲ್ಲಿ ವಿಜೃಂಭಿಸುತ್ತಿರುವ ಸಜ್ಜನ ಬಂಧುಗಳನೇಕರು ಇದಕ್ಕೆ ಕಾರಣವಿಲ್ಲದಿಲ್ಲ. ಈ ರೀತಿ ಚರಿತ್ರಹೀನರಾಗಿ ವರ್ತಿಸುವ ಅನೇಕ ಪ್ರಭೃತಿಗಳ ಬಗ್ಗೆ ಇದೇ ಆಧುನಿಕರು ಮೂಗುಮುರಿಯುತ್ತಲೂ ಬಂದಿದ್ದಾರೆ. ಇಂಥ ಒಂದು ವಿಚಿತ್ರ ವಿಲಕ್ಷಣ ಸ್ಥಿತಿಯಲ್ಲಿ ಬದುಕು ತನ್ನ ರಮ್ಯತೆಯನ್ನೂ ಸೌಂದರ್ಯವನ್ನೂ ಕಳೆದುಕೊಂಡು ಮೌಲ್ಯಗಳು ಆದರ್ಶಗಳು ಸವಕಲು ನಾಣ್ಯಗಳಂತೆನಿಸಿವೆ. ನಿಜವಾಗಿಯೂ ಮೌಲ್ಯಗಳಿಗ ನೆಲೆ ಬೆಲೆ ಇಲ್ಲವೆ?

ಲಕ್ಷಾಂತರ ರೂಪಾಯಿಗಳ ಆಮಿಷವನ್ನು ಒಬ್ಬ ಬ್ರಾಹ್ಮಣನಿಗೋ, ಕ್ಷತ್ರಿಯನಿಗೋ, ವೈಶ್ಯನಿಗೋ, ಶೂದ್ರನಿಗೋ ಒಡ್ಡಿನೋಡಿ. ಅವನನ್ನು ಮತಾಂತರಗೊಳಿಸಲು ಯತ್ನಿಸಿ ನೋಡಿ. ಸಾವಿರ, ಲಕ್ಷ ಸಂದರ್ಭಗಳಲ್ಲಿ ಒಂದರಲ್ಲಿ ನೀವು ವಿಫಲರಾದಿರಿ ಎಂದಿಟ್ಟುಕೊಳ್ಳೋಣ. ಆತನಿಗೆ ಹೆಣ್ಣು ಹೊನ್ನು ತೋರಿ ನಿಮ್ಮ ಬೇಳೆ ಬೇಯುವುದೋ ನೋಡಿ. ಆದರೂ ನೀವು ವಿಫಲರಾದಿರಿ ಎಂದಿಟ್ಟುಕೊಳ್ಳೋಣ. ಜೀವಕ್ಕೆ ಅಪಾಯದ ಭೀತಿಯನ್ನು ತೋರಿದಾಗ, ಇಡೀ ಕುಟುಂಬವೇ ನಾಶವಾಗುವ ಭೀತಿಯಲ್ಲೂ ಆತ ತನ್ನ ನಿಲುವನ್ನು ಬದಲಾಯಿಸಿಕೊಳ್ಳಲಿಲ್ಲ ಎಂದಿಟ್ಟುಕೊಳ್ಳೋಣ. ಸುತ್ತಲಿನ ಜನಸಮೂಹವೂ ಆತನಿಗೆ ವಿರೋಧಿಯಾಗಿ ನಿಂತಾಗ್ಯೂ ತನ್ನ ನಿಲುವನ್ನು ಆತ ಬದಲಾಯಿಸಿಕೊಳ್ಳಲಿಲ್ಲ ಎಂದರೆ ಆತನನ್ನು ಆ ನಿಲುವಿಗೆ ದೃಢವಾಗಿ ಬಂಧಿಸಿದ್ದು ಯಾವುದು? ಒಂದು ಮೌಲ್ಯವಲ್ಲವೆ ? ಒಂದು ಆದರ್ಶವಲ್ಲವೆ ?

ಇದು ಅಸಂಭವ, ಊಹಾಪೋಹ, ವಿರಳ—ಎಂದೆಲ್ಲಾ ಹೇಳಿ ವಾದಾರಣ್ಯದಲ್ಲಿ ಇದನ್ನು ತಳ್ಳಿಹಾಕಬಹುದು. ಆದರೆ ಜೀವನದ ವಿಭಿನ್ನಘಟ್ಟಗಳಲ್ಲಿ, ಬಿಡಿ ಸಂದರ್ಭಗಳಲ್ಲಿ ಇಂಥ ಸನ್ನಿವೇಶಗಳು ಮೆರೆಯುವುದಿದೆ; ಜನಸಮುದಾಯವನ್ನು ದಿಗ್ಭ್ರಮೆಗೊಳಿಸುವುದು ಇದೆ. ಆದರ್ಶ ಮೌಲ್ಯಗಳ ನೆಲೆ ಬೆಲೆ ಇರುವುದು ಇಲ್ಲಿ. ಸಹಸ್ರ ಕರಿಚುಕ್ಕೆಗಳ ನಡುವೆ ಒಂದು ಬಿಳಿ ಚುಕ್ಕೆ ಇದ್ದರೂ ಅದು ಬಿಳಿಯಲ್ಲ ಎನ್ನುವುದು ಮಂಕುತನವಲ್ಲವೆ? ಆ ಒಂದು ಬಿಳಿಯೂ ತನ್ನ ಅಸ್ತಿತ್ವವನ್ನು ಕಪ್ಪುಗಳ ನಡುವೆ ದಟ್ಟವಾಗಿಯೇ ಮೆರೆಸುತ್ತದೆ. ಮೌಲ್ಯಗಳ ನೆಲೆ ಬೆಲೆಯನ್ನು ಅನುಭವದಿಂದಲೇ ಪಡೆಯಬೇಕು. ಇವು ಸಂಸ್ಕೃತಿಯ ಜೀವಾಳ.

ಈ ನೆಲೆಯಲ್ಲಿ ಸಾಮೂಹಿಕ ಮತಾಂತರ ಸಾಧ್ಯವೆ? ಸಂಸ್ಕೃತಿ ಇದಕ್ಕೆ ಎಡೆ ನೀಡುವುದು ಅಸಂಭವವಲ್ಲವೆ? ಮತಾಂತರಗೊಂಡವರ ವೈಯಕ್ತಿಕ ಸ್ವಾತಂತ್ರ್ಯವನ್ನು ಪ್ರಶ್ನಿಸಲಿಕ್ಕಾಗಲೀ, ವೈಯಕ್ತಿಕ ಕಾರಣಗಳನ್ನು ಹುಡುಕುವುದಾಗಲೀ ಇಲ್ಲಿ ಉದ್ದೇಶವಲ್ಲ. ಆದರ್ಶಗಳ, ಮೌಲ್ಯಗಳ ಬೆಲೆಯನ್ನು ವಿವೇಚಿಸುವುದು ಉದ್ದೇಶ. 'ಮತಾಂತರ'ವು ಮೂಲಭೂತವಾಗಿ ಸಾಂಸ್ಕೃತಿಕ ಪ್ರಶ್ನೆಯನ್ನು ಎತ್ತುತ್ತದೆ. ಇಲ್ಲಿ ಕಾರಣಗಳಿಗಿಂತಲೂ 'ಕಾರ್ಯ' ಹೆಚ್ಚು ವಿವೇಚನಾರ್ಹ. ಆಗಲೇ 'ಕಾರ್ಯ'ವನ್ನು ತಡೆಯುವಲ್ಲಿ ನಮ್ಮ ಗಮನ ಹರಿಸುವುದು ಶಕ್ಯವಾದೀತು.

ಸುಸಂಸ್ಕೃತ ಸಮಾಜವು ಆದರ್ಶವನ್ನು ಮೌಲ್ಯವನ್ನು ಬಯಸುತ್ತದೆ; ಬೆಳೆಸುತ್ತದೆ. ಬೆಳೆಸಬೇಕು ಕೂಡಾ. ಸಂಸ್ಕೃತಿಯನ್ನು ಬದುಕಿಗೆ ಅಂಟಿಸುತ್ತದೆ. ಬೇರೆ ಬದುಕಿನೊಂದಿಗೆ ನಂಟನ್ನು ಬೆಳೆಸುತ್ತದೆ ಕೂಡಾ. ಈ ಸಂಸ್ಕೃತಿಯು ಬದುಕಿಗೆ ಅವಶ್ಯವೇ ಹೊರತು, ಸಂಸ್ಕೃತಿಗೆ ಬದುಕಿನ ಆಶ್ರಯ ಬೇಕಿಲ್ಲ. ಸಂಸ್ಕೃತಿ ಇಲ್ಲದ ಬದುಕು ಬದುಕಲ್ಲ; ಜೀವನದಲ್ಲೊಂದು ಬಿರುಕು. ಸಂಸ್ಕೃತಿಗೆ ಬೆಲೆ ಇದೆ. ತಟ್ಟನೆ ಬದುಕಿಗೆ ಬೆಲೆ ಇಲ್ಲವೆ ಎಂಬ ಪ್ರಶ್ನೆ ಏಳುವುದು ಸಹಜ. ಆದರೆ ಬದುಕಿಗೆ ಬೆಲೆ ಬೇಕೆಂದೇ ಸಂಸ್ಕೃತಿ ಬೇಕೆಂಬ ವಾದ.

ಇಲ್ಲಿ ಒಂದು ಸಂಸ್ಕೃತಿಯ ಜನಸಂಖ್ಯೆ ಕಡಿಮೆಯಾಗುತ್ತಿದೆ ಎಂಬ ಸಮಸ್ಯೆಗಿಂತಲೂ, ಸಂಸ್ಕೃತಿಯೇ ನಷ್ಟವಾಗುತ್ತಿದೆ ಎಂಬುದು ದೊಡ್ಡ ಸಮಸ್ಯೆ. ಇನ್ನೊಂದು ರೀತಿಯಲ್ಲಿ ಹೇಳುವುದಾದಲ್ಲಿ 'ಹಿಂದೂ' ಜನಸಂಖ್ಯೆ ಇಳಿಯುತ್ತಿರುವುದು ಸಮಸ್ಯೆಯ ಒಂದು ಮಗ್ಗುಲಾದರೆ, 'ಹಿಂದೂ' ಸಂಸ್ಕೃತಿಯ ಅಧಃಪತನವನ್ನು ಬೆಟ್ಟುಮಾಡಿ ತೋರುತ್ತಿದೆ ಇನ್ನೊಂದು ಮಗ್ಗಲು! ಈ ಎರಡನೇ ಮಗ್ಗುಲಿನ ಅಧಃಪಾತಕ್ಕೆ ನಮ್ಮ ಸನಾತನವಾದ ಮಾನವ ಧರ್ಮಕ್ಕೆ ಹೇಳಿಸಿದ್ದಲ್ಲದ—'ಹಿಂದೂ', 'ಮತ', 'ಪಂಥ', 'ಜಾತಿ', 'ಸವರ್ಣೀಯರು' 'ಅಸ್ಪೃಶ್ಯರು'—ಎಂಬೆಲ್ಲಾ ವಿಘಟಕ ಫಲಕಗಳೂ ಎಷ್ಟೆಷ್ಟು ಪಾತ್ರವಹಿಸುತ್ತವೆ ಎಂದು ಆಳವಾಗಿ ಚಿಂತನೆ ನಡೆಸಬೇಕಾಗಿದೆ! ಪ್ರಕೃತಿರೀತ್ಯ ಬದುಕುವುದು ಸ್ವಾಭಾವಿಕ ಮಾರ್ಗ. ಇದನ್ನು ಸನಾತನವಾದ ಮಾನವ ಧರ್ಮ ಸೂಚ್ಯವಾಗಿಸುತ್ತದೆ. ಆದುದರಿಂದಲೇ ಅದು ಸನಾತನವಾದ ಪ್ರಕೃತಿಧರ್ಮ, ಮಾನವಧರ್ಮ, ವರ್ಣಧರ್ಮ, ಸರ್ವಜೀವ ಸಮತಾಧರ್ಮ!

ಆದುದರಿಂದ ಈ ಸನಾತನ ಧರ್ಮದ ನೆಲೆಯನ್ನು ಕಂಡುಕೊಂಡು ಮತಪಂಥಭೇದಗಳನ್ನು ಬಿಟ್ಟು ಆ ಬಂಧನಗಳಿಂದ ಮೇಲೇರಿ ಬೆಲೆಯುಳ್ಳ ಮೌಲ್ಯಗಳನ್ನು ಬದುಕಿನ ಒಟ್ಟಂದದಲ್ಲಿ ಸಾಂಸ್ಕೃತಿಕವಾಗಿ ಪೋಣಿಸಿ ಮಾನವರೆಲ್ಲರಿಗೂ ಇದರ ನೆಲೆ ಬೆಲೆಯ ಪರಿಕಲ್ಪನೆಯನ್ನು ಸ್ಪಷ್ಟವಾಗಿ ಸೃಷ್ಟಿಸಬೇಕಾಗಿದೆ.

**ಭವಿಷ್ಯದ ಸಮಸ್ಯೆ:—**

ಈ ವರೆಗಿನ ಇತಿಹಾಸದಿಂದ ಪಾಠ ಕಲಿತ ನಾವು ಭವಿಷ್ಯದ ಸಮಸ್ಯೆಗೆ ತೆಪ್ಪಗಾಗಿ ಕುಳಿತುಕೊಳ್ಳದೆ ಭಾರತೀಯ ಜನಾಂಗವನ್ನು ಎಚ್ಚರಿಸುವ 'ಸಾಂಸ್ಕೃತಿಕ ಆಂದೋಲನ'ದಲ್ಲಿ ಸನಾತನಿಗಳಾಗಿ ಈಗಿಂದೀಗಲೇ ತೊಡಗದಿದ್ದಲ್ಲಿ 'ಅಸ್ಪೃಶ್ಯತೆ'ಯ ಸಮಸ್ಯೆಯೇ ಉಳಿಯುವುದಿಲ್ಲ ವೇನೋ!! ಯಾಕೆಂದರೆ, ಆಗಲೇ 'ಅಸ್ಪೃಶ್ಯ'ರೆನಿಸಿಕೊಂಡವರೆಲ್ಲರೂ ಮತಾಂತರಗೊಂಡಿರು ತ್ತಾರೆ. ಬೇರೆ ಒಂದು ಹೊಸ ಫಲಕ ನೀಡಿ ಅಸ್ಪೃಶ್ಯತುಲ್ಯರಾಗುತ್ತಿರುವ ಸವರ್ಣೀಯರನ್ನೇ 'ಉದ್ಧಾರ' ಮಾಡುವ ಕಾರ್ಯ ಕಾದು ಕುಳಿತೀತು!

ಇಂದು ತೆಳುವಾಗಿಯಾದರೂ ಈ ರೀತಿಯ 'ವಿಕಾಸ' ನಡೆಯುತ್ತಲೇ ಇದೆ. 'ಅಸ್ಪೃಶ್ಯ'ರಲ್ಲರೆನಿಸಿಕೊಂಡವರೂ ಬಿಡಿಬಿಡಿಯಾಗಿ, ಸಂಸ್ಕೃತಿಹೀನರಾಗಿ ವಿಶಿಷ್ಟ ಆಮಿಷಗಳಿಗೆ ಬಲಿಯಾಗಿ ಸ್ವಧರ್ಮವನ್ನು ಇಂದು ತ್ಯಜಿಸುತ್ತಿಲ್ಲವೆ? ಈಗಲಾದರೂ 'ಸಂಖ್ಯೆ' ಮುಖ್ಯವೋ 'ಸಂಸ್ಕಾರ' ಮುಖ್ಯವೋ ಎಂದು ವಿವೇಚಿಸಬೇಕಾಗಿದೆ.

ಇದು 'ವಿಕಾಸ'ವೆಂದು ಹೆಸರಿಸಬಹುದಾದ ಈ ವಿದ್ಯಮಾನದಲ್ಲಿ ನಮ್ಮ ನಡೆ ಸಹಜ ವೆಂದಾದಲ್ಲಿ 'ಅಸ್ಪೃಶ್ಯತೆ' ಇಂದು ಎಷ್ಟು ದೊಡ್ಡ ಸಮಸ್ಯೆಯೋ ಅದಕ್ಕೂ ಎಷ್ಟೋ ಮಿಗಿ ಲಾದ ಸಮಸ್ಯೆ ಭವಿಷ್ಯದಲ್ಲಿ ಕಾದಿದೆ ಎಂದರೆ ಅಚ್ಚರಿಯಾಗುವುದೇ? ಅದು ಇಡೀ ಭಾರತೀಯ ಜನಾಂಗವು ಸಾಂಸ್ಕೃತಿಕ ಉತ್ಪಾತಕ್ಕೆ ಒಳಗಾಗಬೇಕಾದ ಸಮಸ್ಯೆ. ನಮ್ಮ ಇಂದಿನ ಪಥ ದರ್ಶನ ಹೀಗಿದೆ... ! ಹೀಗೆ ಹೇಳದೆ ವಿಧಿ ಇಲ್ಲ !

**ವರ್ತಮಾನದ ಹೆಜ್ಜೆಗಳು:**

ಅಂದರೆ, ಭೂತ-ಭವಿಷ್ಯಗಳ ಸೇತುವೆಯಾಗಿರುವ ವರ್ತಮಾನದಲ್ಲಿ ಹೆಜ್ಜೆ ಮೂಡಿ ಸಲೇಬೇಕಾದ ನಾವು, ದಿವ್ಯ-ಭವ್ಯವೆಂದು ಹೇಳಿಕೊಳ್ಳುವ ನಮ್ಮ ಸನಾತನವಾದ ಮಾನವ ಧರ್ಮ-ಸಂಸ್ಕೃತಿಯನ್ನು ಉಳಿಸಿಕೊಳ್ಳಲು, ನಮಗೆಲ್ಲರಿಗೂ ಪ್ರೀತಿಪಾತ್ರರಾದ ಹರಿಜನರು ತಮಗೆ ಪ್ರಾಕೃತವಾಗಿರುವ ಸಂಸ್ಕೃತಿಯಿಂದ ವಿಚ್ಛೇದಗೊಳ್ಳದಂತೆ ಕಾಪಾಡಲು, ಸುಭಗರೆನಿಸಿ ಕೊಂಡುಳ್ಳ ಹರಿಜನರಲ್ಲದವರು ಪೂರ್ಣಕಾಲೀನ ಕುಸಂಸ್ಕೃತಿಗೆ ಇಳಿದು ಅಸ್ಪೃಶ್ಯರಾಗುವುದನ್ನು ತಡೆಯಲು, ಈ ಕೆಳಗಿನ ಕಾರ್ಯಕ್ರಮಗಳನ್ನು ಹಾಕಿಕೊಂಡು ಕಾರ್ಯೋನ್ಮುಖರಾಗಬಹುದು:-

1. ಯಾವುದೇ ಆಮಿಷ ತೋರಿ ಮತಾಂತರಗೊಳಿಸುವುದನ್ನು ಕಾನೂನುಬದ್ಧ ವಾಗಿ ನಿಷೇಧಿಸುವಂತೆ 'ಗಣ'ಸರಕಾರ (ಅರ್ಥಾತ್ ಗಣತಂತ್ರದ ಸರಕಾರ)ವನ್ನು ಸನಾತನಿ ಗಳು ಒತ್ತಾಯಿಸಬಹುದು.

2. ಮತಾಂತರದಲ್ಲಿ ವಿದೇಶೀ ತಂತ್ರಗಳೇನಾದರೂ ಕೈವಾಡವಿರಿಸಿಕೊಂಡಿದೆಯೇ ಎಂಬುದರ ಸತ್ಯಶೋಧನೆಯನ್ನು ಸಾರ್ವತ್ರಿಕವಾಗಿ ಭಾರತೀಯ ಪರಂಪರೆಯುಳ್ಳವರೆಲ್ಲರೂ ಜಾತಿಮತ ಭೇದವಿಲ್ಲದೆ ನಡೆಸಬಹುದು; ಇವರ ಹಿಂದೆ ರಾಜಕಾರಣದ ಉದ್ದೇಶ್ಯವೇನಾದರೂ ಇದೆಯೇ ಎಂದೂ ಅವಲೋಕಿಸಬಹುದು; ಅಂಥವಿದ್ದಲ್ಲಿ ಅದನ್ನು ರಾಜಕೀಯ ಲೇಪವಿಲ್ಲದೆ ಹತ್ತಿಕ್ಕಲು ಪ್ರಯತ್ನಿಸಬಹುದು.

3. ಭಾರತೀಯ ಮೌಲ್ಯಗಳನ್ನು ಎತ್ತಿಹಿಡಿಯಬೇಕಾದ ರಾಜಕಾರಣಿಗಳು ಜಟಿಲ ಸಂಬಂಧವುಳ್ಳ ಕಾರ್ಯ–ಕಾರಣದ ಸರಪಣಿಯ ಮೂಲವನ್ನು ಆಮೂಲಾಗ್ರವಾಗಿಯೂ ನಿರಪೇಕ್ಷವಾಗಿಯೂ ವಿವೇಚಿಸಬಹುದು.

4. ಅಪ್ಪಟ ಜಾತ್ಯಾತೀತವೆನಿಸಬೇಕಾದ ಗಣಸರಕಾರ ಯಾವುದೇ ರೀತಿಯಲ್ಲೂ ಯಾವುದೇ ಧರ್ಮೀಯರನ್ನೂ ಗುರುತಿಸಿ ಸಂಖ್ಯಾಪ್ರಮಾಣವನ್ನು ದಾಖಲಾಗಿಸುವುದನ್ನು ತಕ್ಷಣ ಕೈಬಿಡುವಂತೆ ಸನಾತನಿಗಳು ಒತ್ತಾಯಿಸಬಹುದು.

5. ಧರ್ಮನಿರಪೇಕ್ಷ ಸರಕಾರ ಯಾವುದೇ ಸಾರ್ವಜನಿಕ ಅಥವಾ ಖಾಸಗಿ ಸಂಸ್ಥೆಗಳ ಅರ್ಜಿಫಾರಂಗಳಲ್ಲಿ ಧರ್ಮ, ಮತ, ಜಾತಿಗಳ ಕಲಮುಗಳನ್ನು ತಕ್ಷಣ ಕೈಬಿಡುವಂತೆ ಸನಾತನಿಗಳು ರಾಜಕಾರಣಿಗಳನ್ನು ಬಲವಂತಪಡಿಸಬಹುದು.

6. ಸಮಾಜವಾದವನ್ನು ಮೆಚ್ಚುವ ಸ್ವಚ್ಛ ಗಣತಂತ್ರವು ಧರ್ಮವಾರು, ಮತವಾರು, ಜಾತಿವಾರು ಜನಗಣನೆ ಮಾಡುವುದನ್ನು ನಿಲ್ಲಿಸಿ ಎಲ್ಲಾ ಪ್ರಜೆಗಳಿಗೂ ಸಮಾನ ಹಕ್ಕುಬಾಧ್ಯತೆಗಳನ್ನು ನೀಡುವ ಮಾನವಧರ್ಮದ ಮೌಲ್ಯಗಳನ್ನು ಪ್ರಚುರಪಡಿಸುವಂತೆ ಸನಾತನಿಗಳು ಪ್ರಯತ್ನ ನಡೆಸಬಹುದು.

7. ಧರ್ಮದಲ್ಲೂ ನಿಯಮಗಳು ಆಡಳಿತದಲ್ಲಿರುವಷ್ಟೇ ಅನಿವಾರ್ಯವೆಂದು ತುರ್ತಾಗಿ ಮಾನವಧರ್ಮಿಗಳಾಗಿ ರಾಜಕಾರಣಿಗಳು ವಿವೇಚಿಸುವಂತೆ ಮಾಡಲು ಅವರಿಗೆ ಮನವರಿಕೆ ಮಾಡಿಸಲು ಸನಾತನಿಗಳು ಪ್ರಯತ್ನಿಸಬಹುದು.

8. ರಾಜಕಾರಣಕ್ಕಿಂತ ಮಾನವ ಧರ್ಮವು ಶ್ರೇಷ್ಠ ಎಂದು ತಿಳಿಯುವ ಕೆಲವಾದರೂ ರಾಜಕಾರಣಿಗಳು ಇರುವುದು ಸಾಧ್ಯವಿದೆ! ಅಂಥವರು ಇದ್ದಲ್ಲಿ ಮತಾಂಧರಾಗಿ ವರ್ತಿಸುವ ಮತೀಯ ನೇತಾರರು ಅಥವಾ ಮಠಾಧಿಪತಿಗಳು ಎಲ್ಲೆಲ್ಲಿ ಮಾನವ ಧರ್ಮದ ಪ್ರಜ್ಞೆಗೆ ವಿರುದ್ಧವಾಗಿರುತ್ತಾರೋ ಅಲ್ಲಲ್ಲಿ ತಮ್ಮ ಸತ್ಪ್ರಭಾವವನ್ನು ಇವರ ಮೇಲೆ ಬೀರಿ ಅಂಥ ಮಾನವ ವಿರೋಧಿ ಕುಕಾರ್ಯವನ್ನು ತಡೆಯಲು ಪ್ರಯತ್ನಿಸಬಹುದು.

ಮೇಲಿನ ಹೆಜ್ಜೆಗಳು ಆಡಳಿತ, ರಾಜಕಾರಣ, ಇವೇ ಕ್ಷೇತ್ರಕ್ಕೆ ಸಂಬಂಧಿಸಿದವುಗಳು. ಅಂತೆಯೇ ಮಹಾಜನಸಮುದಾಯದ ಮಧ್ಯೆಯೂ ಅನೇಕ ವಿಧಾಯಕ ಕಾರ್ಯಗಳಿಗೆ ಅವಕಾಶವಿದೆ. ಮಾನವಧರ್ಮದ ಮೂಲ ಕೇಂದ್ರಬಿಂದುವಿನಿಂದಲೇ ಈ ಕಾರ್ಯಗಳು ಮೂರ್ತಗೊಂಡರೇ ಕ್ಷೇಮಕರ, ಅಂಥವುಗಳು ಕೆಲವು ಇಲ್ಲಿವೆ:

9. ಇಂದಿನ ವಿಷಮ ಶಿಕ್ಷಣಪದ್ಧತಿಗೆ ಪೂರಕವಾಗಿರುವ, ಪ್ರಕೃತಿ ವಿರೋಧಿಯಾಗುಳ್ಳ ಪಾಶ್ಚಾತ್ಯ ಸಂಸ್ಕೃತಿಯನ್ನೇ ಪ್ರೋತ್ಸಾಹಿಸುವ ಕಿಂಡರ್‌ಗಾರ್ಟನ್‌ಗಳೆಂಬ 'ಬಾಲವಾಡಿ'ಯ ಬದಲಾಗಿ, ಮಾನವಧರ್ಮವನ್ನು ಭದ್ರವಾಗಿ ಬಿತ್ತಬಲ್ಲ "ಬಾಲಸಂಸ್ಕಾರ ಕೇಂದ್ರ"ಗಳನ್ನು ಹಳ್ಳಿ ಹಳ್ಳಿಯಲ್ಲೂ ಪ್ರಾರಂಭಿಸಬಹುದು; ಯಾವುದೇ ಮತದಲ್ಲಿ ತನ್ನನ್ನು ಅಂಟಿಸಿಕೊಂಡಿರದ, ಮಾನವ ಪ್ರೇಮಿಯೂ ಮಾನವ ಧರ್ಮಿಯೂ ಆಗಿರುವ, ಸುಸಂಸ್ಕೃತ ಗುರುವೊಬ್ಬರು ಈ ಸಂಸ್ಕಾರ ಕೇಂದ್ರದಲ್ಲಿರುವಂತೆ ಸನಾತನಿಗಳು ನಿಯೋಜಿಸಬಹುದು.

10. ಪ್ರಾಥಮಿಕ ಮತ್ತು ಪ್ರೌಢಹಂತದ ಶಿಕ್ಷಣವು ಇಂದು ಮಾನವ ಧರ್ಮದ ಬೆಳವಣಿಗೆಗೆ ಪೂರಕವಾಗಿರದ ಕಾರಣ, ವೈಯಕ್ತಿಕವಾದ ಸರ್ವಾಂಗೀಣ ಬೆಳವಣಿಗೆಗೆ ಪೂರಕವಾಗಿರದ ಕಾರಣ, ಔದ್ಯೋಗಿಕವಾಗಿಯೂ ಅವ್ಯವಸ್ಥವಾಗಿ ವಿದ್ಯಾರ್ಥಿಗಳ ಉತ್ಪಾದನೆ ಮಾಡುತ್ತಿರುವ ಕಾರಣ–ಈ ವಿಷಮ ಶಿಕ್ಷಣ ಪದ್ಧತಿಗೆ ವಿರಾಮ ಹೇಳದೆ ವಿಧಿ ಇಲ್ಲ. ಇದಕ್ಕೆ ಬದಲಾಗಿ ಹಳ್ಳಿ ಹಳ್ಳಿಯಲ್ಲೂ ಮಾನವ ಧರ್ಮಕ್ಕೆ ಜೀವನ ಧರ್ಮಕ್ಕೆ ಅನುವರ್ತಿಯಾಗುಳ್ಳ ಆಶ್ರಮ ಜೀವನದ (ರೆಸಿಡೆನ್ಶಿಯಲ್) ತೆರನಾದ "ಮಾನವಧರ್ಮ ಕೇಂದ್ರ''ಗಳೆಂಬ ವಿದ್ಯಾಮಂದಿರಗಳನ್ನು ಸನಾತನಿಗಳು ಪ್ರಾರಂಭಿಸುವಲ್ಲಿ ಪ್ರಮುಖ ಪಾತ್ರ ವಹಿಸಬಹುದು; ಇಂಥ ವಿದ್ಯಾಮಂದಿರಗಳನ್ನು ನಡೆಸಲು ವಿದ್ಯಾವಿನಯ ಸಂಪನ್ನ ಕ್ರಿಯಾಶೀಲ ಕಾರ್ಯಕರ್ತರನ್ನು ತಯಾರಿಸುವ ಭಾರವನ್ನೂ ಇದೇ ಸನಾತನಿಗಳು ವಹಿಸಿಕೊಳ್ಳಬಹುದು.

11. ಮಾನವರೆಲ್ಲರಿಗೂ ಯಾವುದೇ ಉದ್ಯೋಗ ಮಾರ್ಗವನ್ನು ಅನುಸರಿಸುವಲ್ಲಿ ಯೋಗ್ಯತೆ ನೀಡಬಲ್ಲ ವಿದ್ಯಾವಿಧಿವಿಧಾನಗಳನ್ನು ಮಾನವ ಧರ್ಮದ ಆಸ್ತಿವಾರದ ಮೇಲೆ ಸನಾತನಿಗಳು ನಿರೂಪಿಸಬಹುದು; ಯಾವುದೇ ಭೇದವಿಲ್ಲದೆ ಮಾನವ ಮಾತ್ರರಿಗೆ ಉದ್ಯೋಗದ ಆಯ್ಕೆಯ ಸಂಪೂರ್ಣ ಸ್ವಾತಂತ್ರ್ಯ,ಯೋಗ್ಯತಾನುಸಾರ ಉದ್ಯೋಗಕ್ಕೆ ಆಯ್ಕೆ, ಯೋಗ್ಯತೆಗೆ ಸರಿಯಾಗಿ ಆಯ್ಕೆಗೊಂಡಾಗ ಅದನ್ನು ಸ್ಪಷ್ಟ ನೇರ ವಿಧಾನವೆಂದು ಪರಿಗಣಿಸುವ ಮಾನವ ಮೂಲ ಮಾನವ ಧರ್ಮ–ಇವೆಲ್ಲವನ್ನು ರೂಢಿಸುವ ವಿದ್ಯಾಪ್ರಕ್ರಮವೊಂದು ಪ್ರಯತ್ನಯೋಗ್ಯ.

12. ಮಾನವ ಮಾತ್ರನನ್ನು ಪ್ರಕೃತಿಗೆ ಹೊಂದಿಸುವತ್ತ, ಅರ್ಥಾತ್ ಮಾನವ ಧರ್ಮದತ್ತ ಕೊಂಡೊಯ್ಯಬಲ್ಲ, ಹಂತ ಹಂತದಲ್ಲೂ ಮಾನವನನ್ನು ಮೊದಲು ಆತ್ಮೀಕವಾಗಿ, ಬಳಿಕ ವ್ಯಾವಹಾರಿಕವಾಗಿ ಉತ್ಥಾನದತ್ತ ಏರಿಸಬಲ್ಲ ಸದ್ವಿದ್ಯೆ ಇಂಥ ವಿದ್ಯಾಮಂದಿರಗಳಲ್ಲಿ ಸಿಗುವಂತೆ ಸನಾತನಿಗಳು ಯೋಜಿಸಿಕೊಂಡರೆ ಸ್ವಾಗತಾರ್ಹ.

13. ಸಮಾಜದ ಹಿರಿಯರಲ್ಲೂ ಮಾನವ ಧರ್ಮದ ಸತ್ಸಂಸ್ಕಾರಗಳನ್ನು ರೂಢಿಸಲು ಹಳ್ಳಿ ಹಳ್ಳಿಯಲ್ಲೂ "ಜನ ಸಂಸ್ಕಾರ ಕೇಂದ್ರ"ಗಳನ್ನು ಸಂಸ್ಥಾಪಿಸುವ ಮುತುವರ್ಜಿಯತ್ತ ಸನಾತನಿಗಳು ತೀವ್ರ ಗಮನಹರಿಸಬಹುದು.

14. ಯಾವುದೇ ಮತಭೇದವಿಲ್ಲದೆ ಹಳ್ಳಿ ಹಳ್ಳಿಯ ದೇವಮಂದಿರಗಳನ್ನು ವೇದಮಂದಿರಗಳನ್ನಾಗಿ ಅರ್ಥಾತ್ ಜ್ಞಾನಮಂದಿರಗಳನ್ನಾಗಿ ಬದಲಾಯಿಸುವ, ಮಾನವರೆಲ್ಲರೂ ಮಾನವಧರ್ಮದತ್ತ ಸಾಗುವ ಕೇಂದ್ರಗಳನ್ನಾಗಿ ಪರಿವರ್ತಿಸುವ ಮಹಾಕಾರ್ಯವನ್ನು ಈ ಮಣ್ಣಿನ ಕಣದಿಂದ ಜನ್ಮಪಡೆದ ಪ್ರತಿಯೋರ್ವನೂ ಕೈಗೆತ್ತಿಕೊಳ್ಳಬಹುದು.

15. ಮಾನವಧರ್ಮವು ನಾರಿಗೆ ನೀಡಿದ ಉನ್ನತ ಸ್ಥಾನವನ್ನು ಮರುಸ್ಥಾಪಿಸಲೋಸುಗ ಹಳ್ಳಿ ಹಳ್ಳಿಯಲ್ಲೂ "ಸ್ತ್ರೀ ಸಂಸ್ಕಾರ ಕೇಂದ್ರ"ಗಳನ್ನು ತೆರೆದು ಸ್ತ್ರೀಯರು ಬಾಲಕ ಬಾಲಿಕೆಯರನ್ನು ಯುವಕ ಯುವತಿಯರನ್ನು, ಪುರುಷರನ್ನು ಸನ್ಮಾರ್ಗದಲ್ಲಿ ನಡೆಸುವಂತೆ ಮಾಡುವ ಚಾರಿತ್ರ್ಯದರ್ಶನವನ್ನು ಮಾಡುವ ಕಾರ್ಯಕ್ಕೆ ಸನಾತನಿಗಳಾದ ಸ್ತ್ರೀಪುರುಷರು ಮುಂದಾಗಬಹುದು.

16. ಪ್ರಚಾರ ಡಾಂಭಿಕತನಗಳನ್ನು ಹಿಮ್ಮೆಟ್ಟಿಸಿ, ಸಂಸ್ಕೃತಿವಂತರ ಕಾರ್ಯಚಟುವಟಿಕೆಗಳ "ಸತ್ಫಲ"ಗಳೇ ಸ್ವಯಂಪ್ರಚಾರದ ಆಕರ್ಷಣೆಯನ್ನು ಜನಸಮುದಾಯಕ್ಕೆ ಒದಗಿಸುವ ಅವಕಾಶವನ್ನು ಸನಾತನಿಗಳು ಪುಷ್ಕಳವಾಗಿ ನಿರ್ಮಿಸಬಹುದು; "ಸತ್ಫಲ"ಗಳೇ ಸನ್ಮಾರ್ಗದರ್ಶಿಯಾಗುವಂತೆ ಮಾಡುವ ಮಹತ್ಕಾರ್ಯದಲ್ಲಿ ಸನಾತನಿಗಳು ತೊಡಗಬಹುದು.

17. "ಜನ ಸಂಸ್ಕಾರ ಕೇಂದ್ರ"ಗಳು ವ್ಯಕ್ತಿವ್ಯಕ್ತಿಯಲ್ಲೂ, ಕುಟುಂಬ ಕುಟುಂಬದಲ್ಲೂ ಮತಭೇದಕ್ಕೆ ಎಡೆಕೊಡದ ಮಾನವೀಯ ಸದಾಚಾರ ಸದ್ವಿಚಾರಗಳನ್ನು ಬೆಳೆಸಬಲ್ಲ ಕಾಂತಶಕ್ತಿಗಳಾಗುವಂತೆ ಸನಾತನಿಗಳು ಪ್ರಯತ್ನಿಸಬಹುದು.

18. ಇಂದು ಅನೇಕ ಸಾಂಸ್ಕೃತಿಕ ಕಾರ್ಯಚಟುವಟಿಗಳಲ್ಲಿ ತೊಡಗಿರುವ ಸಂಘಸಂಸ್ಥೆಗಳ ಹೊರಗಿನ ಪ್ರಚಾರದ ಆಡಂಬರದ ಭಾಗಗಳನ್ನು ಗೌಣವಾಗಿಸಿ, ಅವೇ ರಚನಾಶಕ್ತಿ, ಕೃತುಶಕ್ತಿಯನ್ನು ಮಾನವಧರ್ಮದ ಮೂಲಭೂಮಿಕೆಯ ಮೇಲೆ ರೂಪಿಸುವಂತೆ ಸನಾತನಿಗಳು ಈ ಸಂಘ ಸಂಸ್ಥೆ ವ್ಯಕ್ತಿಗಳ ಮೇಲೆ ಸತ್ಪ್ರಭಾವ ಬೀರಬಹುದು; ಅಲ್ಲೂ ಮಾನವ ಧರ್ಮವೇ ಮುಖ್ಯವಾಗಿ, ಭೇದಾಚಾರಕ್ಕೆ ಎಡೆಕೊಡುವ ಮತ, ಪಂಥ, ಜಾತಿಗಳ ಬಳಕೆಗೆ ಏನೇನೂ ಅವಕಾಶ ಸಿಗದಂತೆ ಜಾಗೃತಿ ಅತ್ಯವಶ್ಯ.

19. ಇಂದು ಬಿಡಿಬಿಡಿಯಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ವಿನಿಯೋಗವಾಗುತ್ತಿರುವ ಆರ್ಥಿಕ ಸಂಪನ್ಮೂಲಗಳನ್ನು ಏಕತ್ರವಾಗಿ ಮಾನವಧರ್ಮದ ಪೋಷಣೆಗೇ ದೊರೆಯುವಂತೆ ಮಾಡುವಲ್ಲಿ ಸನಾತನಿಗಳೆಲ್ಲರೂ ಪ್ರಯತ್ನಿಸುವಂಥ ಸತ್ಪ್ರೇರಣೆಯನ್ನು ಪಡೆಯಲೆತ್ನಿಸಬಹುದು—ಸಾಮ ಮತ್ತು ದಾನ ಮಾರ್ಗಗಳಲ್ಲಿ.

20. ಈ ಎಲ್ಲ ಸತ್ಕಾರ್ಯಗಳಿಗೆ ಸುಸೂತ್ರವಾಗಿ, ನಿರಪೇಕ್ಷವಾಗಿ ಕೆಲಸ ಮಾಡಬಲ್ಲ ದೇಶಪ್ರೇಮಿ, ಮಾನವಪ್ರೇಮಿ ಕಾರ್ಯಕರ್ತರ ತಂಡಗಳನ್ನು ಸಜ್ಜುಗೊಳಿಸಬಹುದು; ಈ ತಂಡದ ಕಾರ್ಯಾಚರಣೆಯು ಪ್ರಕೃತಿಸ್ಥವಾದ ಮಾನವಧರ್ಮವನ್ನು ಬೆಳೆಸಿ ಪೋಷಿಸುವ ಏಕಮೇವ ಧ್ಯೇಯದ್ದಾಗಿರಬೇಕು; ಇದೂ ಪ್ರಚಾರದಲ್ಲಿ ಅಲ್ಲ; ಕೃತಿಯಲ್ಲೇ ಪಾರದರ್ಶಕತೆಯನ್ನು ಹೊರಡಿಸುವಲ್ಲಿ ಜಾಗೃತಿ ತೋರಿಸುವುದು ಅನಿವಾರ್ಯ.

21. ಅಂಥ ಅನೇಕಾನೇಕ ಮಾನವೀಯ ಚಟುವಟಿಕೆಗಳಿಗೆ ನಿಯಂತ್ರಣವನ್ನೂ ಚಾಲನೆಯನ್ನೂ ನೀಡಬಲ್ಲ ಸ್ಫೂರ್ತಿ ಚಿಲುಮೆಯಂತಿರುವ ಮಹಾನ್ ವ್ಯಕ್ತಿಯೊಬ್ಬರ ಆವಶ್ಯಕತೆ ಇದೆ. ತನ್ನ ಕೃತಿಯಿಂದರಷ್ಟರಲ್ಲೇ ಗಮನಾರ್ಹವಾಗಿರುವ, ಪ್ರಚಾರದ ಲವಲೇಶವೂ ಇಲ್ಲದೆ ತನ್ನ ನೇರ ನಡೆಯಿಂದ ಮಾನವನಾಗಿ ಬದುಕುತ್ತಿರುವ ಶಕ್ತಿರಾಶಿ ತೇಜೋರಾಶಿಯನ್ನು ಸನಾತನಿಗಳು ಅನ್ವೇಷಿಸಲೇಬೇಕಾಗಿದೆ. ಇಂದು, ಇಂಥ ಒಬ್ಬ ಮಹಾನ್‌ವ್ಯಕ್ತಿ ಈ ಮಣ್ಣಿನಲ್ಲಿ ಈಗಲೂ ಇರುವುದು ಖಂಡಿತಾ ಸಾಧ್ಯ. ಆದರೆ ಇಂಥವರು ಸಾಮಾನ್ಯವಾಗಿ ಜನಸಾಗರದಿಂದ ದೂರವೇ ಇದ್ದು ಯಾರೊಂದಿಗೂ ಯಾವುದೇ ಸಂಪರ್ಕವನ್ನಿರಿಸಿಕೊಳ್ಳದೆ ಇರುತ್ತಾರೆ. ಸಾಮಾನ್ಯ ಮಾನವರಂತೆ ಇಂಥ ಮಹಾನ್‌ವ್ಯಕ್ತಿಗಳು ಬದುಕು ಸಾಗಿಸುತ್ತಿರುತ್ತಾರೆ. ಆದರೆ ಮಾನವ ಸಂಪರ್ಕ ಇಲ್ಲದಿದ್ದಾಗ್ಯೂ ಮಾನವರ ಯಾವುದೇ ಆಧುನಿಕ ಸಮಸ್ಯೆಗೂ ಇಂಥ ಮಹಾನುಭಾವರು ಪರಿಹಾರ ನೀಡಬಲ್ಲರು. ಕಾರಣ: ಮಾನವಮಾತ್ರನ ಏಳ್ಗೆಯೇ ಇಂಥವರ ಧ್ಯೇಯ; ಇಂಥವರ ಜೀವನವೇ ಮಾನವಧರ್ಮದ ಸತ್ಯಸಂಪುಟ,

ಈ ದಿಸೆಯಲ್ಲಿ ಸನಾತನಿಗಳೆಲ್ಲರ ವಿಚಾರ-ಆಚಾರ ಹರಿದಲ್ಲಿ ಮಾನವರೆಲ್ಲರೂ ಜತೆಗೂಡಿ ಮಾನವಧರ್ಮವನ್ನು ಮತ್ತೊಮ್ಮೆ ಪ್ರತಿಷ್ಠಾಪಿಸುವುದು ಕಠಿಣವಲ್ಲ!

ಇದಕ್ಕಾಗಿ ಕಾಲದ ಗಂಟೆ ಬಾರಿಸುತ್ತಿದೆ; ಕಿವಿ ಇದ್ದರೆ ಕೇಳಿಸಿಕೊಳ್ಳುವುದು ಶ್ರೇಯಸ್ಕರ. ಮಾನವಧರ್ಮದ ಮರುಸ್ಥಾಪನೆಯಾಗದೆ ಮಾನವ ಜೀವನ ಸ್ವಸ್ಥವಾಗುವ ಸಂಭವ ಗೋಚರಿಸುತ್ತಿದೆಯೆ?



# ಪ್ರಾರ್ಥನೆ

ಹಿಂದಿಯಿಂದ: **ಜಗದೀಶ ವಿದ್ಯಾರ್ಥೀ, ಕನ್ನಡಕ್ಕೆ: ಗುಂಡ್ಮಿ ಚಂದ್ರಶೇಖರ ಐತಾಳ.**

ಪ್ರಾರ್ಥನೆ ಒಂದು ಮಹಾ ಆಧ್ಯಾತ್ಮಿಕ ಶಕ್ತಿಯಾಗಿದೆ. ಸಾಧಕನು ಮಾತ್ರ ಇದರ ಶಕ್ತಿಯ ಮಹತ್ತ್ವವನ್ನು ಬಲ್ಲ. ಪ್ರಾರ್ಥನೆಯು ಪರ್ವತಗಳನ್ನೂ ನಡುಗಿಸಬಲ್ಲುದು; ಅದ್ಭುತವೂ, ಆಶ್ಚರ್ಯಜನಕವೂ ಆದ ಕಾರ್ಯಗಳನ್ನು ಮಾಡಬಲ್ಲುದು. ಪ್ರಾರ್ಥನೆಯಿಂದ ಮನಸ್ಸು ಶುದ್ಧವೂ, ಪವಿತ್ರವೂ, ನಿರ್ಮಲವೂ ಆಗುತ್ತದೆ. ಪತಿತ ಆತ್ಮವೂ ಪ್ರಾರ್ಥನೆಯ ಮೂಲಕ ಬಲವನ್ನು ಪಡೆದು ನೂತನ ತೇಜಸ್ಸಿನಿಂದ ಉದ್ದೀಪ್ತ ಹೊಂದುತ್ತದೆ. ಪ್ರಾರ್ಥನೆಯು ಮನುಷ್ಯನನ್ನು ದೈವತ್ವದ ಪದವಿಗೆ ತಲುಪಿಸಿ ಅವನ ಜೀವನದಲ್ಲಿ ಹೊಸ ಜ್ಯೋತಿಯನ್ನು ಹಚ್ಚುತ್ತದೆ. ಪ್ರಾರ್ಥನೆಯಿಂದ ಬಲಸಂಪಾದಿಸಿ ನಿರ್ಬಲ ಮನುಷ್ಯನೂ ನಗುನಗುತ್ತ ತನ್ನನ್ನು ತಾನೇ ಧರ್ಮದ ಬಲಿಪೀಠದಲ್ಲಿ ಬಲಿದಾನ ಮಾಡಿಕೊಳ್ಳುತ್ತಾನೆ. ಪ್ರಾರ್ಥನೆಯಲ್ಲಿ ಅಮೋಘ ಶಕ್ತಿ ಇದೆ. ಅಲ್ಲದೆ, ಯುವಕ, ಯುವತಿ; ಸ್ತ್ರೀಪುರುಷರೆಂಬ ಭೇದವಿಲ್ಲದೆ ಎಲ್ಲರೂ ಪ್ರಾರ್ಥನೆಯನ್ನು ಆಚರಿಸಬೇಕು. ನಾವು ಪ್ರಾರ್ಥಿಸೋಣ; ಆದರೆ ಇಂಥ ಪ್ರಾರ್ಥನೆಯನ್ನು ಎಂದೂ ಮಾಡುವುದು ಬೇಡ.

ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವ ಚ |
ಪಾಹಿ ಮಾಂ ಪುಂಡರೀಕಾಕ್ಷ ಸರ್ವಪಾಪಹರೋ ಹರಿಃ ||

ನಾನು ಪಾಪ, ಪಾಪಕರ್ಮ ಮಾಡುವವನು, ಪಾಪಾತ್ಮನಾಗಿದ್ದೇನೆ. ಪ್ರಭೂ! ನನ್ನನ್ನು ರಕ್ಷಿಸು. ಅಥವಾ,

ಪ್ರಭು ಮೈ ಸಬ್ ಪತಿತನ ಕೋ ಟೀಕೋ ||
ಔರ್ ಪತಿತ ತೋ ಫೌಸ್ ಚುಕೆ ಮೈತೋ ಜನ್ಮತ ಹೀ ಕೋ ||

ಅಥವಾ,

ಮೈ ಮೂರಖ್ ಖಲ ಕಾಮೀ | ಕೃಪಾಕರೋ ಭರ್ತಾ ||

ಯಾವುದೇ ವ್ಯಕ್ತಿ, ಜಾತಿ, ದೇಶ, ರಾಷ್ಟ್ರ ತನ್ನನ್ನು ಪತಿತ, ದೀನ, ಹೀನ, ಅನಾಥ ಎಂದು ಭಾವಿಸುವುದೋ ಅದು ಇಂದಲ್ಲದಿದ್ದರೆ ನಾಳೆ ಅಥವಾ ನಾಡಿದು ಹಾಗೆಯೇ ಆಗುತ್ತದೆ. ನಮ್ಮನ್ನು ನಾವೇ ಪಾಪಿ, ಪತಿತ ಎಂದು ಭಾವಿಸಿದರೆ ನಾವು ಹಾಗೆಯೇ ಆದೇವು. ಆದ್ದರಿಂದ

ಇಂಥ ಪ್ರಾರ್ಥನೆಗಳನ್ನು ಮಾಡಬೇಡಿರಿ. ವೇದ ಮಂತ್ರಗಳ ಮೂಲಕ ಇಂಥ ಪ್ರಾರ್ಥನೆಗಳನ್ನು ಮಾಡಿರಿ.

ತೇಜೋಽಸಿ ತೇಜೋ ಮಯಿ ಧೇಹಿ ವೀರ್ಯಮಸಿ ವೀರ್ಯಂಮಯಿ ಧೇಹಿ ।
ಬಲಮಸಿ ಬಲಂ ಮಯಿ ಧೇಹಿ ಓಜೋಽಸ್ಯೋಜೋ ಮಯಿದೇಹಿ ।
ಮನ್ಯುರಸಿ ಮನ್ಯುಂ ಮಯಿಧೇಹಿ ಸಹೋಽಸಿ ಸಹೋ ಮಯಿ ಧೇಹಿ ॥

(ಯಜುರ್ವೇದ: ೧೯-೯)

ಪ್ರಭೂ! ನೀನು ತೇಜಸ್ಸ್ವರೂಪನಾಗಿರುವೆ; ನನ್ನನ್ನೂ ತೇಜಸ್ವಿಯನ್ನಾಗಿ ಮಾಡು. ನಿನ್ನ ತೇಜಸ್ಸಿನಿಂದ ನಾನು ತೇಜಸ್ವಿಯಾಗಿ ನಿಸ್ತೇಜರಲ್ಲಿ ತೇಜಸ್ಸು ಸಂಚರಿಸುವಂತೆ ಮಾಡುವೆ. ನೀನು ಮಹಾ ಪರಾಕ್ರಮಶಾಲಿ; ನನ್ನಲ್ಲೂ ಪರಾಕ್ರಮವನ್ನು ತುಂಬು. ನಿನ್ನ ಪರಾಕ್ರಮದಿಂದ ನಾನು ಪರಾಕ್ರಮಿಯಾಗಿ ವೈದಿಕ ಉಪದೇಶಗಳನ್ನು ಭೂಮಂಡಲದಲ್ಲೆಲ್ಲ ಪ್ರತಿಧ್ವನಿಸುವಂತೆ ಮಾಡುವೆ! ಪರಮಾತ್ಮ! ನೀನು ಬಲಸ್ವರೂಪನಾಗಿರುವೆ. ನನ್ನಲ್ಲೂ ಬಲವನ್ನು ತುಂಬು. ನಿನ್ನ ಬಲದಿಂದ ನಾನೂ ಬಲಶಾಲಿಯೆನ್ನಿಸಿ ಪ್ರಪಂಚದ ಅಜ್ಞಾನ, ಅನ್ಯಾಯ, ಅಭಾವಗಳನ್ನು ದೂರಮಾಡುವೆ. ದೇವ! ನೀನು ಓಜಸ್ವಿಯಾಗಿರುವೆ. ನನಗೂ ಓಜಸ್ಸನ್ನು ನೀಡು. ಆದ್ದರಿಂದ ನಾನು ಪಾಪಿಗಳನ್ನು ಸೋಲಿಸುವೆ. ಪ್ರಭು! ನೀನು ದುಷ್ಟರಿಗೆ ಕ್ರೋಧಿಯಾಗಿರುವೆ. ನನಗೂ ಆ ಕ್ರೋಧವನ್ನು ದಾನಮಾಡು; ಅದರಿಂದ ನಾನು ದುಷ್ಟರನ್ನು ಉರುಳಿಸಬಲ್ಲೆ. ಪರಮಾತ್ಮ! ನೀನು ಸಹನಶೀಲನಾಗಿರುವೆ. ನನ್ನನ್ನೂ ಸಹನಶೀಲನನ್ನಾಗಿಸು. ಎಂಥ ದಿವ್ಯ ಪ್ರಾರ್ಥನೆ!

---

# ಸುಪಥ ಗಮನ

ವೇದಗಳು ಮನುಷ್ಯನಿಗೆ ಸುಪಥದಲ್ಲಿ ಚಲಿಸುವಂತೆ ಬೋಧಿಸುತ್ತವೆ.

ಋತಸ್ಯ ಪಥಾ ಪ್ರೇತ । (ಯಜುರ್ವೇದ: ೭-೪೫)

ಜನರೇ! ನೀವೆಲ್ಲ ಸತ್ಯಮಾರ್ಗದಲ್ಲಿ ಮುಂದುವರಿಯಿರಿ.

ಋತಸ್ಯ ಪಂಥಾ ಮನುಪಶ್ಯ ಸಾಧ್ವಂಗಿರಸಃ ಸುಕೃತೋ ಯೇನಯಂತಿ ॥

(ಅಥರ್ವ: ೧೮-೪-೩)

ವಿದ್ವಾಂಸರಾದ ಜ್ಞಾನಿಗಳು ಯಾವ ಉತ್ತಮ ಮಾರ್ಗದಲ್ಲಿ ನಡೆಯುತ್ತಾರೋ ನೀವೂ ಅದೇ ಸತ್ಯಮಾರ್ಗದ ಸಾಕ್ಷಾತ್ಕಾರ ಮಾಡಿಕೊಳ್ಳಿರಿ; ಅದೇ ಮಾರ್ಗವನ್ನು ಸರಿಯಾಗಿ ತಿಳಿದುಕೊಳ್ಳಿ.

ಶೀಭಂ ರಾಜನ್ ಸುಪಥಾ ಯಾಹ್ಯರ್ವಾಙ್ । (ಅಥರ್ವ: ೨೦-೯೪-೨)

ನನ್ನ ಆತ್ಮವೇ! ನೀನು ಉತ್ತಮ ಮಾರ್ಗದಲ್ಲಿ ಮುಂದುವರಿ. ಬನ್ನಿ, ನಾವೆಲ್ಲರೂ ಸೇರಿ ವೇದಗಳ ಶಬ್ದಗಳಿಂದ ಪ್ರಾರ್ಥಿಸೋಣ:

ಮಾ ಪ್ರ ಗಾಮ ಪಥೋ ವಯಂ ಮಾ ಯಜ್ಞಾದಿಂದ್ರ ಸೋಮಿನಃ ।
ಮಾಂತ ಸ್ಥುರ್ನೋ ಅರಾತಯಃ ॥ (ಅಥರ್ವ: ೩-೧೧-೫೯)

ಪರಮೇಶ್ವರ! ನಾವು ನಮ್ಮ ಪಥದಿಂದ ಎಂದೂ ವಿಚಲಿತರಾಗದಿರಲಿ. ಶಾಂತಿ ದಾಯಕ ಶ್ರೇಷ್ಠ ಕರ್ಮಗಳಿಂದ ನಾವೆಂದೂ ಚ್ಯುತರಾಗದಿರಲಿ. ಕಾಮ, ಕ್ರೋಧಾದಿ ಶತ್ರುಗಳು ಎಂದೂ ನಮ್ಮ ಮೇಲೆ ಆಕ್ರಮಿಸದಿರಲಿ.

ತನ್ನ ದಾರಿಯಲ್ಲಿ ದೃಢವಾಗಿಯೂ ಅಚಲವಾಗಿಯೂ ಇರುವವನಲ್ಲಿಗೆ ಸಫಲತೆ ಹುಡುಕಿಕೊಂಡು ಬರುವುದು. ಶ್ರೀ ಸೋಹನ್‌ಲಾಲ್ ದ್ವಿವೇದೀಯವರು ಸರಿಯಾಗಿ ಹೀಗೆ ಬರೆದಿದ್ದಾರೆ.

ಅಚಲ್ ರಹಾ ಅಪ್ನೇ ಪಥ್‌ಪರ್ ಲಾಖ್ ಮುಸೀಬತ್ ಆನೇ ಮೇ
ಮಿಲೀ ಸಫಲತಾ ಜಗ ಮೇ ಉಸ್‌ಕೋ ಜೀನೇ ಮೇ ಮರ್‌ಜಾನೇ ಮೇ
ಖಡಾ ಹಿಮಾಲಯ್ ಬತಾರಹಾ ಹೈ ಡರೋ ನ ಆಂಧೀ ಪಾನೀ ಸೇ
ಖಡೇ ರಹೋ ಅಪ್ನೇ ಪಥ್‌ಪರ್ ಸಬ್ ಕಠಿನಾಈ ತೂಫಾನೀ ಮೇ ॥

ನಾವು ನಮ್ಮ ದಾರಿಯಲ್ಲಿ ನಡೆಯೋಣ; ನಮ್ಮ ಪಥದಿಂದ ಎಂದೂ ವಿಚಲಿತರಾಗದಿರೋಣ. ಅಲ್ಲದೆ ಎಂಥ ಮಾರ್ಗದಲ್ಲಿ ನಡೆಯೋಣ? ವೇದ ಹೇಳುತ್ತದೆ.

ಪ್ರತಿ ಪಂಥಾಮಪದ್ಮಹಿ ಸ್ವಸ್ತಿ ಗಾಮನೇಹಸಮ್ ।
ಯೇನ ವಿಶ್ವಾಃ ಪರಿದ್ವಿಷೋ ವೃಣಕ್ತಿ ವಿಂದತೇ ವಸು ॥ (ಯಜುರ್ವೇದ: ೪-೨೯)

ನಾವು ಸುಖಪೂರ್ವಕ ಉತ್ತಮಸ್ಥಾನದ ವರೆಗೆ ತಲುಪಿಸುವ ಉಪದ್ರವರಹಿತವಾದ, ಮನುಷ್ಯನಿಗೆ ಸರ್ವೈಶ್ವರ್ಯಗಳನ್ನುಂಟುಮಾಡುವ ದೋಷದೂರವಾದ ಮಾರ್ಗದಲ್ಲಿ ನಡೆಯೋಣ.

ಸ್ವಸ್ತಿ ಪಂಥಾಮನು ಚರೇಮ ಸೂರ್ಯಾ ಚಂದ್ರಮಸಾವಿವ ।
ಪುನರ್ದದತಾಘ್ನತಾ ಜಾನತಾ ಸಂಗಮೇಮಹಿ ॥ (ಋಗ್ವೇದ: ೫-೫೧-೧೫)

ನಾವು ಸೂರ್ಯಚಂದ್ರಮರಂತೆ ಸದಾ ಕಲ್ಯಾಣಮಯ ಮಾರ್ಗದಲ್ಲಿಯೇ ನಡೆಯೋಣ; ಅಲ್ಲದೆ ದಾನಶೀಲ, ಅಹಿಂಸಕ, ಜ್ಞಾನಿಗಳ ಸಂಗವನ್ನು ಮಾಡೋಣ.

ಖೋಟಾ, ಕುಟಿಲ, ದುಷ್ಟ ಮಾರ್ಗವನ್ನು ವಿರೋಧಿಸುತ್ತ, ವೇದವು ಪ್ರಪಂಚದ ಸಮಸ್ತ ಮಾನವರಿಗೆ ಸಂದೇಶ ನೀಡುತ್ತದೆ:

ಮೈತಂ ಪಂಥಾಮನು ಗಾ ಭೀಮ ಏಷಯೇನ ಪೂರ್ವಂ ನೇಯಥತಂ ಬ್ರವೀಮಿ ।
ತಮ ಏತತ್ ಪುರುಷ ಮಾ ಪ್ರ ಪತ್ಥಾ ಭಯಂ ಪರಸ್ತಾದಭಯಂ ತೇ ಅರ್ವಾಕ್ ॥
(ಅಥರ್ವ: ೮-೧-೧೦)

ಖೋಟಾ; ವಕ್ರ ಮಾರ್ಗವನ್ನು ಅನುಸರಿಸದಿರಿ, ಈ ಮಾರ್ಗ ಬಹಳ ಭಯಂಕರವಾದುದು. ನೀನು ಹಿಂದೆಂದೂ ನಡೆಯದ ಅಧರ್ಮ ಮಾರ್ಗದ ಬಗೆಗೆ ಅದು ಅಂಧಕಾರ ಪೂರ್ಣ ಎಂದು ನಿಮಗೆ ಉಪದೇಶಿಸುತ್ತೇನೆ. ಅಂಥ ಕುಮಾರ್ಗ, ಕುಟಿಲ ಅಧರ್ಮ ಪಥದ ಕಡೆಗೆ ತಿರುಗಬೇಡ; ಅದರಲ್ಲಿ ಭಯವಿದೆ. ಧರ್ಮಪಥದಲ್ಲಿ ನಡೆದರೆ ಕಲ್ಯಾಣವಿದೆ. ಕುಪಥವನ್ನು ಬಿಟ್ಟು ಸುಪಥಗಾಮಿಯಾಗು. ಕುಮಾರ್ಗ ಹಾನಿಕರ, ಸುಮಾರ್ಗದಲ್ಲಿ ಕಲ್ಯಾಣ ಕಟ್ಟಿಟ್ಟದ್ದು.

ಸುಗಃ ಪಂಥಾ ಅನೃಕ್ಷರ ಆದಿತ್ಯಾಸ ಋತಂ ಯತೇ ।
ನಾತ್ರಾವಖಾದೋ ಅಸ್ತಿ ವಃ । (ಋಗ್ವೇದ: ೧-೪೧-೪)

ಸುಪಥಗಾಮಿಯಾದವನಿಗೆ ಮಾರ್ಗ ಸುಗಮವೆನಿಸುತ್ತದೆ; ವಿಘ್ನಬಾಧಾರಹಿತವೆನ್ನಿಸುತ್ತದೆ. ಈ ಮಾರ್ಗದಲ್ಲಿ ನಿಮಗೆ ಹಾನಿಯಿಲ್ಲ.

ಸುಪಥದಲ್ಲಿ ನಡೆಯಿಸುವಂತೆ ನಾವು ದೇವರನ್ನು ಪ್ರಾರ್ಥಿಸೋಣ:

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ವಿಶ್ವಾನಿ ದೇವ ವಯುನಾನಿ ವಿದ್ವಾನ್ ।
ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ॥
(ಯಜುರ್ವೇದ: ೪೦-೧೬)

ಸರ್ವರನ್ನೂ ಮುನ್ನಡೆಯಿಸುವ ಪರಮಾತ್ಮ! ನೀನು ನಮಗೆ ವಿಜ್ಞಾನ, ಧನ, ಐಶ್ವರ್ಯಗಳ ಪ್ರಾಪ್ತಿಗಾಗಿ ಸುಪಥದಲ್ಲಿ ನಡೆಯಿಸು. ನೀನು ಸಂಪೂರ್ಣ ಜ್ಞಾನಿ; ಸರ್ವಜ್ಞಾನಿ ಅಲ್ಲದೆ ನಮ್ಮಿಂದ ಕುಟಿಲತಾಯುಕ್ತ ವ್ಯವಹಾರವನ್ನು ದೂರಮಾಡು. ನಾವು ನಿನ್ನನ್ನು ಬಗೆಬಗೆಯಿಂದ ಕೊಂಡಾಡುತ್ತೇವೆ.

---

# ಮಹರ್ಷಿ ದಯಾನಂದರ ಪಾವನಸ್ಮೃತಿ

## ❁ ಶ್ರೀ ಎಂ. ರಾಮಕೃಷ್ಣ ಭಟ್ಟ

ಸದ್ಧರ್ಮದ ಗ್ಲಾನಿಯಾಗಿ ದುಷ್ಕರ್ಮಗಳ
ಪದ್ಧತಿಯು ಗದ್ದುಗೆಯನೇರಿ ಬಲದಿಂ ತನ್ನ,
ಬುದ್ಧಿಯನ್ನಾವರಿಸಿ ಜನರ ಪಾಪಾಂಧತ ಮನದೊಳೆಲ್ಲರಂ ಮುಳುಗಿಸಿ ॥
ಶುದ್ಧಾತ್ಮ ನೀನುದಿಸಿ ಹೇ **ದಯಾನಂದ ಮುನಿ**
ಖದ್ಯೋತನಂತೆ, ಸುಜ್ಞಾನ ದೀಪ್ತಿಯ ಬೀರಿ
ವೃದ್ಧ ಕೀರ್ತಿಯ ಪಡೆದೆ, ಭಾರತಾಂಬೆಯ ಧನ್ಯಳಂ ಮಾನ್ಯಳಂ ಮಾಡಿದೆ ॥ ೧ ॥

ಸ್ಥೈರ್ಯದೊಳ್ಪರ್ವತವ ಪೋಲ್ವ ನೀನತ್ಯಧಿಕ
ಧೈರ್ಯದಿಂ ಕಷ್ಟಗಳ ಸಂತೋಷದಿಂ ಸಹಿಸಿ,
ಕಾರ್ಯದೊಳ್ ಸಮದುಃಖ ಸುಖನಾಗಿ ರಾಜಿಸಿದೆ ಯಾಮಿನೀ ರಾಜನಂತೆ ॥

ವೀರ್ಯರಕ್ಷಣೆಯಿಂದ ಸದ್ಬ್ರಹ್ಮಚಾರಿನರ,
ಸೂರ್ಯ ಪ್ರಭಾನ್ವಿತನೆ, ಪೊಂದಿ ದೃಢಕಾಯುವ
ನ್ನಾರ್ಯ ಧರ್ಮಪ್ರಭೆಯ ದೇದೀಪ್ಯಮಾನ ಪ್ರದೀಪ ನೀನಾದೆ ಯೋಗೀ ॥ ೨ ॥

ಪರಮೇಶನೊಳ್ಸತತ ದೃಢಭಕ್ತಿಯಿರಿಸಿ ನೀ
ನುರುತರದ ತಪವನಾಚರಿಸಿದೆ ಮುನೀಶ ನೀ
ನರಿಯಲ್ಕೆ ಪರಮಾತ್ಮನಂ ಘೋರ ವಿಪಿನದೊಳ್ ಶ್ವಾಪದ ಸಮೂಹದೊಳಗೆ ॥
ಅರತನಾಗಿರ್ದೆವೈದಯಿಕೆ ಭೋಗದಿ, ಪರರ
ಪುರುಷತ್ವಪೂರ್ಣರಂ ಮಾಡಲೆಂದು ಸ್ವಹಿತ
ಕಿರವ ಕೊಡದೆ ಪ್ರಯತ್ನವ ಮಾಡಿ ದೇಶದುದ್ಧಾರ ಕಾರ್ಯವನೆಸಗಿದೆ ॥ ೩ ॥

ಯೋಗಾದಿರೂಢನಾಗಿರ್ದು ಬಾಹ್ಯಾಂತರವ
ನೀಗಿ ಮಲವಂ ಗೆಲ್ದು ಮಾನಸಿಕ ಶತ್ರುಗಳ
ನಾಗಮಂಗಳ ಪಾರದೃಶ್ವನೀನಾದೆ ಮುನಿವರ್ಯ ನೀನೇ ಸುಧನ್ಯ ॥
ತ್ಯಾಗ ಮಾಡಿದೆ ಫಲದೊಳಿಚ್ಛೆಯನು ಧರ್ಮೋಪ
ಯೋಗಿತೆಯ ಜನರಿಂಗರುಹಲೆಂದು ನಾಲ್ದೆಸೆಗೆ
ಪೋಗಿ ನೀನತ್ತೆ ಸದ್ಧರ್ಮೋಪದೇಶವನ್ನೀಶ್ವರ ಸೇವೆಗಾಗಿ ॥ ೪ ॥

ವೇದವಿದ್ವೇಷ್ಯ ಮಾನುಷ ಕೃತ್ಯಗಳ ನೋಡಿ
ವೇದನಾಯುತವಾಗೆ ನಿನ್ನ ಮಾನಸವು ಮೇ
ಣ್ವೈದಿಕಾರ್ಯಸಮಾಜವಂ ಮಾಡಿ ಸನ್ಮಾರ್ಗಕೆಳೆದೆ ನೀಂ ದುರ್ಜನರನು ॥
ವಾದದೊಳ್ಕಾಶಿಯುವ್ವಾದ ಸೂರಿಗಳೊಡನೆ
ವೇದಜ್ಞನೇಕಾಕಿಯಾಗಿ ನೀನವಲಿಪ್ತ
ರಾದವರ ಸೋಲಿಸಲ್ ನೀಚಕೃತ್ಯವ ಮಾಡಿದವರ್ಗಿತ್ತೆ ಶಾಂತಿವಚನ ॥ ೫ ॥

ಪರಿಣಯುವ ಮಕ್ಕಳಿಗೆ ಬಾಲ್ಯದೊಳ್ಮಾಳ್ಪುದನು
ಪರಿಹರಿಸಬೇಕೆಂದು ಯತ್ನಿಸಿದೆ ಮುನಿವರ್ಯ,
ಪರಿಹಾಸಯೋಗ್ಯ ಮೂರ್ತ್ಯರ್ಚೆಯನು ಖಂಡಿಸಿದೆ ವೇದದಾಧಾರದಿಂದೆ ॥
ಪರಮಾತ್ಮನವತಾರ ಮೊದಲಾದ ಪೌರಾಣಿ
ಕರ ಮಾತುಗಳ ಗುರುವೆ ನಿಷ್ಪಕ್ಷಪಾತದಿಂ
ದರುಹಿ ಸತ್ಯಾರ್ಥ ಪ್ರಕಾಶದೊಳಸತ್ಯತೆಯ ಸತ್ಯಾತ್ಮನಾದೆ ನೀನು ॥ ೬ ॥

ಮುನಿವರ್ಯ ನಿನ್ನ ಪೆಸರೆನಿತು ಪಾವನವೊ ನಿನ
ಗೆಣೆಯಿಲ್ಲ ಮತಭೋದಕಾಚಾರ್ಯರೊಳು, ಜನ್ಮ
ವನು ಕೊಟ್ಟ ಭಾರತ ದಾಸ್ಯಬಂಧುಗಳಲ್ಲಿ ನೀನೋರ್ವನಿದ್ದೆ ಗುರುವೆ ॥
ಮನುಜರ್ಗೆ ನೀಮಾಡಿದುಪಕಾರ ವತ್ಯಂತ
ಘನವಮೂಲ್ಯವು ಋಣಿಗಳಾಗಿಹೆವು ನಾವಿದಕೆ
ವಿನಯದಿಂದಾದರ್ಶಯತಿ ನಿನ್ನನನುಸರಿಸಿ ಧಾರ್ಮಿಕರು ಜನರಾಗಲಿ ॥ ೭ ॥

# ನೀವೂ ಹೀಗಿದ್ದೀರಾ?

● ಕೆ. ವಿ. ಶೇಷಾಚಲಪತಿ, ಬಿ. ಎ,

ಕ್ಷಮಿಸಿ, ನಿಮ್ಮ ವೈಯಕ್ತಿಕ ವಿಷಯದಲ್ಲಿ ಕೈಹಾಕುತ್ತಿರುವೆನೆಂದು ಕೋಪಿಸದಿರಿ. ನಾನು ನಿಮ್ಮ ಪರಿಚಿತನಲ್ಲದಿರಬಹುದು. ಆದರೆ ನಿಮ್ಮ ಶುಭ ಚಿಂತಕನೆಂಬ ಬಗ್ಗೆ ಅನುಮಾನ ಬೇಡ. ನಾನು ನಿಮ್ಮ ಸ್ವಭಾವವನ್ನು ಹೊರಗೆಳೆಯಲು, ನಿಮ್ಮ ನಂಬಿಕೆಗಳ ಬಗ್ಗೆ ಜಾಹೀರಾತು ಮಾಡಲು ಹೊರಟವನಲ್ಲ. ಆದರೂ ನಿಮ್ಮ ನಂಬಿಕೆಗಳಲ್ಲಿ ಕೆಲವು ಅದೆಷ್ಟು ಸೂಕ್ತ ಎಂಬುದರ ಚಿಂತನೆಗೆ ಹಚ್ಚುವಂತೆ ಮಾಡುವುದಷ್ಟೆ ನನ್ನ ಕೆಲಸ. ಆದ್ದರಿಂದ ಸ್ವಲ್ಪ ಸಹನೆಯಿಂದ ಮುಂದಿನ ಸಾಲುಗಳನ್ನು ಓದಿನೋಡಿರಿ.

ಬೆಳಗ್ಗೆ ಎದ್ದು ಪ್ರಾತರ್ವಿಧಿಗಳನ್ನು ತೀರಿಸಿ, ಮುಖ್ಯವಾದ ಕಾರ್ಯವೊಂದನ್ನು ನೆರವೇರಿಸಲು ಹೊರಟ್ಟಿದ್ದೀರಿ. ಬಾಗಿಲಬಳಿ ಹೋಗುತ್ತಿರುವಂತೆಯೇ ಬೆಕ್ಕೊಂದು ನಿಮಗೆ ದುರಾಗಿ ಎಡದಿಂದ ಬಲಕ್ಕೆ ಓಡುತ್ತದೆ. ಆಗ ನೀವು 'ಓಹೋ ಇಂದು ನಾನು ಹಿಡಿದ ಕೆಲಸ ನೆರವೇರದು'–ಎಂದುಕೊಂಡು ಹಿಂದಿರುಗಿಬರುತ್ತೀರಿ. ಅಥವಾ ಸ್ವಲ್ಪಕಾಲ ಮನೆಯಲ್ಲಿ ಕುಳಿತಿದ್ದು ಮತ್ತೆ ಹೊರಡುವಿರಿ. ಆದರೂ ಬೆಕ್ಕು ಅಡ್ಡಬರುವ ಮುನ್ನ ನಿಮ್ಮ ಮನದಲ್ಲಿದ್ದ ಹುರುಪು ಮಾಸಿಹೋಗಿದೆ........ ಸಾಯಂಕಾಲ ಮನೆಗೆ ಮರಳಿದಾಗ ನಿಮ್ಮ ಮೆಚ್ಚಿನ ಮಡದಿ–"ಹೋದ ಕೆಲಸ ಏನಾಯಿತೂಂದ್ರೀ"....ಎಂದು ರಾಗವೆಳೆಯುತ್ತಾಳೆ. ನಿಮಗೆ ಮಾತನಾಡಲು ಆಗುವುದಿಲ್ಲ. ಏಕೆಂದರೆ ನೀವು ಹೋದ ಕಾರ್ಯ ಯಶಸ್ವಿಯಾಗಿ ವಿಫಲಗೊಂಡಿರುತ್ತದೆ. ನಿಮ್ಮ ಧುಮುಗುಡುವ ಮುಖ ನೋಡಿ ಹೆದರಿದ ಪತ್ನಿಯು ಪೆಚ್ಚುಮೋರೆಯೊಂದಿಗೆ ಅಡಿಗೆಕೋಣೆಗೆ ತೆರಳುತ್ತಾಳೆ. ಆಕೆಯ ಪೆಚ್ಚುಮೋರೆ ಗಮನಿಸಿದ ನಿಮಗೆ ಆಕೆಯಮೇಲೆ ಕರುಣೆ, ಅನುಕಂಪ ಉಕ್ಕೇರುತ್ತದೆ—'ನೋಡು........ ಬೆಳಗ್ಗೆ ಹೋಗುವಾಗ ಬೆಕ್ಕು ಎದುರಾಯಿತಲ್ಲಾ! ಅದರ ಮಹಿಮೆ ನೋಡು. ನಾನಂದುಕೊಂಡ ಕೆಲಸ ನೆರವೇರಲಿಲ್ಲ" ಎನ್ನುತ್ತೀರಿ. ನಂತರ ಇಡೀ ಮನೆಯಲ್ಲಿ ದುಃಖದುಮ್ಮಾನದ ವಾತಾವರಣ ಪಸರಿಸುತ್ತದೆ.

*     *     *     *     *

ನೀವು ಪದವೀ ಪರೀಕ್ಷೆ ಕೊಡಲಿದ್ದೀರಿ! ಪರೀಕ್ಷೆ ದಿನಾಂಕ ವೇಳೆ ಎಲ್ಲಾ ಮೊದಲೇ ನಿಶ್ಚಿತವಾಗಿದೆ. ಆದರೆ ಪರೀಕ್ಷೆಗೆ ಹೊರಡಬೇಕಾದ ಮೊದಲದಿನ ಚುಮು ಚುಮು ನಸುಕಿನಲ್ಲಿ ದಿನಪತ್ರಿಕೆ ಬಾಗಿಲ ಕಿಂಡಿಯಿಂದ ತೂರಿಬರುತ್ತದೆ. ಹಾಗೆ ಓದುತ್ತಾ ಓದುತ್ತಾ 'ನಿತ್ಯಭವಿಷ್ಯ'ದ ಕಾಲಂ ಕಡೆ ನಿಮ್ಮ ಕಣ್ಣು ಹೊರಳುತ್ತದೆ. ನಿಮ್ಮ 'ರಾಶಿ'ಯತ್ತ ನೋಡುತ್ತೀರಿ. "ಪರೀಕ್ಷೆಯಲ್ಲಿ ನಪಾಸು, ವ್ಯಾಕುಲತೆ" ಎಂದು ನಿಮ್ಮ 'ರಾಶಿ'ಯ ಬಗ್ಗೆ ಬರೆದಿರುತ್ತದೆ. ನಿಮಗೆ ಸಹಜವಾಗಿ ಆಘಾತ (Shock) ಆಗುತ್ತದೆ. ಸ್ವಲ್ಪ ಕಾಲ ತಲೆ ಮೇಲೆ ಕೈಹೊತ್ತು ಕುಳಿತುಕೊಳ್ಳುತ್ತೀರಿ. ಪರೀಕ್ಷೆಗೆ ಹಣ ಕಟ್ಟಿ ಆಗಿದೆ. ಸ್ವಲ್ಪ ಮಟ್ಟಿಗೆ ಆ ಬಗ್ಗೆ ತಯಾರಿ ಕೂಡ ನಡೆಸಿದ್ದೀರಿ! 'ಮಾಡಲೋ ಬಿಡಲೋ' ಎಂಬಂತಹ ಹ್ಯಾಮ್ಲೆಟ್ (ಶೇಕ್ಸ್‌ಪಿಯರ್‌ನ ಒಂದು ಟ್ರ್ಯಾಜಿಕ್ ಪಾತ್ರ) ನೀವಾಗುತ್ತೀರಿ. ಗತ್ಯಂತರ

ವಿಲ್ಲವೆಂಬಂತೆ ಪರೀಕ್ಷಾ ಕೇಂದ್ರಕ್ಕೆ ಹೋಗಿಬರುತ್ತೀರಿ. ಸಂಜೆಗೆ ನಿಮ್ಮ ತಾಯಿ "ಏನು ಮಗೂ! ಹೇಗೆ ಮಾಡಿದ್ದೀ"—ಎಂದು ಕಾತುರ ತುಂಬಿದ ಸ್ವರದಲ್ಲಿ ಕೇಳುತ್ತಾಳೆ. ನಿಮ್ಮ ಮ್ಲಾನವದನ ನೋಡಿ ಆಕೆಗೆ ಮತ್ತಷ್ಟು ವ್ಯಾಕುಲತೆ ಮೂಡುತ್ತದೆ—ನಿಧಾನವಾಗಿ ಹೇಳುತ್ತೀರಿ—"ಏನು ಮಾಡುವುದಮ್ಮಾ! ನನ್ನ ಗ್ರಹಗತಿಗಳೇ ಚಲೋ ಇಲ್ಲ. ನಾನು ಪಾಸಾಗುವ ಸಂಭವವಿಲ್ಲ" ಎಂದು ನಿಟ್ಟುಸಿರಿಡುತ್ತೀರಿ. ಭವಿಷ್ಯದ ಅಂಧಕಾರವು ನಿಮ್ಮ ಕಣ್ಣುಗಳಲ್ಲಿಯೂ ಕತ್ತಲೆ ತರಿಸುತ್ತದೆ. ಕುಸಿದು ಕೂರುತ್ತೀರಿ.

* * * * *

ನೀವೂ ಈಗ 27–28 ವರ್ಷಗಳ ಯುವಕರು. ಉತ್ತಮ ಹುದ್ದೆಯೊಂದು ನಿಮ್ಮದಾಗಿದೆ. ಕೆಲಸದಲ್ಲಿ ಬಹುಮಟ್ಟಿನ ಯಶಸ್ಸೂ ಸಿಕ್ಕಿದೆ. ಸಹಜವಾಗಿ ತಂದೆ-ತಾಯಿಯರು ನಿಮಗೊಬ್ಬ ಬಾಳ ಸಂಗಾತಿಯನ್ನು ತರಲು ಆತುರರಾಗಿದ್ದಾರೆ. ನಿಮ್ಮ ಹೆತ್ತವರು ತಮ್ಮಲ್ಲಿಗೆ ಆಯಾಚಿತವಾಗಿ ಬಂದ ಜಾತಕಗಳ ರಾಶಿಯಲ್ಲಿ ಹುದುಗಿದ್ದಾರೆ. ನೀವಾದರೋ ನಿಮ್ಮ ಆಫೀಸಿನಲ್ಲಿ ಕೆಲಸಮಾಡುತ್ತಿರುವ ಸಹೋದ್ಯೋಗಿಯೊಬ್ಬಳಲ್ಲಿ 'ಅನುರಕ್ತ'ರಾಗಿದ್ದೀರಿ. ಪೂರ್ವಾಚಾರ ಸಂಪ್ರದಾಯ ಪ್ರಿಯರಾದ ನಿಮ್ಮ ಹೆತ್ತವರು ಈ ಸಂಬಂಧಕ್ಕೆ ಏನೆನ್ನುವರೋ-ಎಂಬ ಅಳುಕು ನಿಮಗಿದ್ದರೂ ಪ್ರೇಮದ ಬಳ್ಳಿ ನಿಮಗರಿವಿಲ್ಲದಂತೆ ನಿಮ್ಮಿಬ್ಬರನ್ನು ಗಾಢವಾಗಿ ಬಂಧಿಸಿದೆ. ಒಂದೊಮ್ಮೆ 'ಗಗನವಿಹಾರ'ದಿಂದ 'ಭೂಮಿ'ಗಿಳಿದ ನೀವು ಆಕೆಯನ್ನು ಕೇಳುತ್ತೀರಿ—"ನನಗೆ ಅಗತ್ಯವಿಲ್ಲ, ಆದರೂ—ನನ್ನ ತಾಯ್ತಂದೆಯರಿಗಾಗಿ—ನಿನ್ನ 'ಜಾತಿ' ಯಾವುದೆಂದು ತಿಳಿಸುತ್ತೀಯಾ?". ಆಕೆ ಹೇಳುತ್ತಾಳೆ ನಿಮಗೆ ಪೂರ್ಣತೃಪ್ತಿ. ಏಕೆಂದರೆ ದೈವಯೋಗದಿಂದ ನಿಮ್ಮ 'ಜಾತಿ'ಯೇ ಆಕೆಯದೂ ಸಹ. ಆದೇ ದಿನ ಧೈರ್ಯ ವಹಿಸಿ ತಾಯಿಯ ಬಳಿ ಈ ಬಗ್ಗೆ ಮೆಲ್ಲನುಸುರುತ್ತೀರಿ. ನಿಮ್ಮ ತಾಯಿಗೆ ಆಶ್ಚರ್ಯ—"ನಮ್ಮ ಹುಡುಗ ಎಷ್ಟು ಮುಂದುವರಿದಿದ್ದಾನೆ?" ಎಂದು ಚಿಂತೆ-ಆಕೆಯೊಡನೆ ಇನ್ನಿತರ ಸಂಬಂಧ ಹೇಗಿರುತ್ತದೋ ಎಂದು. ತಂದೆಗೆ ವಿಷಯ ತಿಳಿದು ಅವರು ಹೇಳುತ್ತಾರೆ—"ನಮಗೆ ವರದಕ್ಷಿಣೆ ಬೇಡ, ಹುಡುಗಿ ಬಡವೆಯಾದರೂ ಚಿಂತೆಯಿಲ್ಲ........" ಹೀಗೆ ಹೇಳುತ್ತಿರುವಂತೆಯೇ ನಿಮ್ಮ ಮಾರ್ಗ ಸುಗಮವಾಯಿತೆಂದು ಯೋಚಿಸತೊಡಗುತ್ತೀರಿ. ನಿಮ್ಮ ಯೋಚನೆಗೆ ಲಗಾಮು ಹಾಕುವಂತೆ ನಿಮ್ಮ ತಂದೆ ಹೇಳುತ್ತಾರೆ-"ಆದರೆ.... ಜಾತಕ ಸಂಬಂಧ (ಮೇಳಾಮೇಳಿ) ಕೂಡಿ ಬರಬೇಕು, ಅದು, ನಿನ್ನ, ನಮ್ಮ, ಕುಟುಂಬದ ಎಲ್ಲರಿಗೂ ಸಂಬಂಧಪಟ್ಟಿದ್ದು." ಇದು ನಿಮಗೆ ಹೆಚ್ಚೇನೂ ಚಿಂತೆಯನ್ನುಂಟುಮಾಡುವುದಿಲ್ಲ. ಅಂದು ನಿಮ್ಮ, 'ಆಕೆ'ಯೊಂದಿಗೆ ಮಾತನಾಡಿ ಜಾತಕ ಮನೆಗೆ ಕಳುಹಿಸುವ ಏರ್ಪಾಟು ಮಾಡಿಸುತ್ತೀರಿ. ನಿಮ್ಮ ಪರಿವಾರದ ಪುರೋಹಿತರು ಜಾತಕ ಪರಿಶೀಲಿಸುತ್ತಾರೆ. ಕುತೂಹಲಭರಿತರಾದ ನಿಮ್ಮ ತಂದೆ-ತಾಯಿ, ಆತುರ-ಕಾತುರಭರಿತರಾದ ನೀವು ಪುರೋಹಿತರ ಪ್ರತಿಕ್ರಿಯೆಯನ್ನೇ ನೋಡುತ್ತಿದ್ದೀರಿ. ಪುರೋಹಿತರು ಕೂಡಿ, ಕಳೆದು, ಗುಣಿಸಿ, ಭಾಗಿಸಿ ತಲೆಯೆತ್ತುತ್ತಾರೆ. ನಿಮಗೆ ಉತ್ಕಟ ಕ್ಷಣಗಳವು "ಬೇಗ ಹೇಳಿ"—ಎಂಬಂತೆ ಅವರತ್ತ ಕಣ್ಣಿನಲ್ಲೇ ಕೇಳುತ್ತೀರಿ. ಅವರು ನಿಧಾನವಾಗಿ ತಮ್ಮ ಕನ್ನಡಕವನ್ನು ತೆಗೆದು ಉತ್ತರೀಯದಂಚಿನಿಂದ ಒರೆಸುತ್ತಾ ಹೇಳುತ್ತಾರೆ—"ಹುಡುಗಿಯದು ಮೂಲಾನಕ್ಷತ್ರ. ಉಳಿದುದನ್ನು ನೀವೇ ನಿಶ್ಚಯಿಸಿ" ಎಂದು ನಿಮ್ಮ ತಂದೆಗೆ ಹೇಳಿ ನಿರ್ಗಮಿಸುತ್ತಾರೆ. ತಾಯಿ ನಿಮ್ಮತ್ತ ತಿರುಗಿ ಹೇಳುತ್ತಾಳೆ—"ಮಗೂ!

ಈ ಸಂಬಂಧ ಸಾಧ್ಯವಿಲ್ಲ, ಏಕೆಂದರೆ...ಏಕೆಂದರೆ....ಈ ಮೂಲಾನಕ್ಷತ್ರವಿರುವ ಹುಡುಗಿಯಿಂದ ಆಕೆಯ ಮಾವನಿಗೆ ಪ್ರಾಣಕ್ಕೆ ಸಂಚಕಾರವಿದೆ. ಈ ಹುಡುಗಿಯನ್ನು ನಿನಗೆ ತಂದುಕೊಂಡು ನಿನ್ನ ತಂದೆಯನ್ನು, ಅಲ್ಲ ನನ್ನ ಸೌಭಾಗ್ಯವನ್ನು ಕಳೆದುಕೊಳ್ಳಲೇ?"—ಎಂದೇನೋ ಹೇಳು ತ್ತಿರುವಂತೆ, ನಿಮಗೆ ಜಗತ್ತಿಡೀ ಕೊಚ್ಚಿಹೋಗುತ್ತಿರುವಂತೆ ಅದರಲ್ಲಿ ನೀವೂ ಒಬ್ಬರಾಗಿದ್ದಂತೆ ಭಾಸವಾಗುತ್ತದೆ. ನಿಮಗೆ ಗಾಢಾಂಧಾಕಾರದಲ್ಲಿ ಮುಳುಗಿದ ಅನುಭವ!

* * * * *

ನಿಮಗೀಗ ಇಳಿವಯಸ್ಸು, ಆದರೆ ವಂಶವೃಕ್ಷವನ್ನು ಚಿಗುರೊಡೆಯುವಂತೆ ಮಾಡುವ ಒಬ್ಬ ಮಗ ಅಥವಾ ಕೊನೆಗೆ ಮಗಳೂ ನಿಮಗಿಲ್ಲ. "ಅಯ್ಯೋ ದೇವರೆ! ಎಲ್ಲಾ ಐಶ್ವರ್ಯವನ್ನೂ ಕೊಟ್ಟು ಸಂತಾನ ಭಾಗ್ಯವನ್ನು ಕರುಣಿಸಲಿಲ್ಲವಲ್ಲಾ" ಎಂದು ನಿಟ್ಟುಸಿರಿಡದ ದಿನವಿಲ್ಲ. ನಿಮ್ಮ ಪತ್ನಿ ಸಂತಾನಕ್ಕಾಗಿ ಮಾಡದ ಪೂಜೆ–ಪುರಸ್ಕಾರಗಳಿಲ್ಲ, ಸಂದರ್ಶಿಸದ ವೈದ್ಯ ಶಿಖಾಮಣಿಗಳಿಲ್ಲ. ಕಟ್ಟಿಕೊಳ್ಳದ ಹರಕೆಗಳಿಲ್ಲ, ವೈದ್ಯರಾಜರ ಚಿಕಿತ್ಸಾ ಪ್ರೌಢಿ ಮೆಯೋ, ನಿಮ್ಮ ಪತ್ನಿಯ ಪೂಜಾ–ನೇಮ–ನಿಷ್ಠೆಗಳ ಫಲವೋ ನಿಮ್ಮ ಪತ್ನಿ ಕೊನೆಗೂ ಗರ್ಭಿಣಿಯಾಗಿದ್ದಾರೆ. ಆಕೆಯನ್ನು ಬಹು ಎಚ್ಚರಿಕೆಯಿಂದ, ಶ್ರದ್ಧೆಯಿಂದ, ಪ್ರೀತಿ–ವಾತ್ಸಲ್ಯ ಗಳಿಂದ ನೋಡಿಕೊಳ್ಳುವ ಎಲ್ಲಾ ವ್ಯವಸ್ಥೆ ಮಾಡಿದ್ದೀರಿ. ನಿಮ್ಮ ಭಾವೀ ಸಂತಾನದ ಬಗೆಗೆ, ಅದರ ಅಭ್ಯುದಯದ ಬಗೆಗೆ, ಅದರಿಂದ ನಿಮ್ಮೀರ್ವರಿಗೂ ಸಿಗಬಹುದಾದ ಸಂತಸದ ಬಗೆಗೆ ನೂರು ಕನಸುಗಳನ್ನು ಕಟ್ಟಿದ್ದೀರಿ. ಗರ್ಭಿಣಿಯ ಆರೋಗ್ಯದ ಬಗೆಗೆ, ಆಕೆಯ ಬಯಕೆಗಳ ಪೂರೈಕೆಗೆ ಬೇಕಾದ ಎಲ್ಲಾ ವ್ಯವಸ್ಥೆಯನ್ನು ಸಹರ್ಷದಿಂದ ಮಾಡುತ್ತಿದ್ದೀರಿ. ಏಕೆಂದರೆ ನಿಮ್ಮ ಪತ್ನಿಯ ಬಗೆಗಿನ ಮೋಹಕ್ಕಿಂತ ಹೆಚ್ಚಾಗಿ ನಿಮ್ಮ ಭಾವೀ ಸಂತಾನದ ಯೋಗ ಕ್ಷೇಮದ ಕಾಳಜಿ, ನಿಮ್ಮನ್ನು ತಂದೆಯ ಪಟ್ಟಕ್ಕೇರಿಸಲಿರುವ ಆ ಕರುಳಿನ ಕುಡಿಯ ಬಗೆಗಿನ ಕಾಳಜಿ ಹೆಚ್ಚಾಗಿದೆ. ಅದು ಸಹಜ ಕೂಡ. ನಿರೀಕ್ಷಿಸಿದ ಸಮಯ ಬಂತು, ಮುದ್ದಾದ ಗಂಡುಮಗುವೊಂದಕ್ಕೆ ನಿಮ್ಮ ಪತ್ನಿ ಜನನವಿತ್ತಳು, ನೀವು ಬಯಸಿದಂತೆ ಕುಲೋದ್ಧಾರಕನೇ ಅವತರಿಸಿದ್ದಾನೆ, ನಿಮ್ಮ ಸಂತೋಷಕ್ಕೆ ಪಾರವೇ ಇಲ್ಲ. ಆದೇ ಸಂತೋಷದಲ್ಲಿ ನಿಮ್ಮ ಬಂಧು–ಮಿತ್ರರಿಗೆಲ್ಲಾ ಸಿಹಿ ಹಂಚಿಯಾಯಿತು. ಮಗುವಿನ ಜನನ ಸಮಯವನ್ನು ತೆಗೆದುಕೊಂಡು ಪ್ರಸಿದ್ಧ ಜ್ಯೋತಿಷಿಗಳ ಬಳಿಗೆ ಹೋಗುತ್ತೀರಿ. ಅವರು ಅತ್ಯಂತ ನಿಖರವಾಗಿ ಭವಿತವ್ಯವನ್ನು ತಿಳಿಸುವವರೆಂದು ಖ್ಯಾತರು. ಇದ್ದುದನ್ನು ಇದ್ದಂತೆಯೇ ಹೇಳುವ ನಿಷ್ಠುರ ಸತ್ಯವಾದಿಗಳು. ಹಾಗೆಂದೇ ಅವರ ಮಾತಿನಲ್ಲಿ ನೀವೂ ಸೇರಿದಂತೆ–ಬಹಳ ಜನರಿಗೆ ಅಪಾರ ವಿಶ್ವಾಸ. ಜನನ ಸಮಯದ ಆಧಾರದ ಮೇಲೆ ಲೆಕ್ಕಾಚಾರ ಹಾಕಿ ಹೇಳಿದರು. ಮಗು ಹುಟ್ಟಿರುವುದು ಕೆಟ್ಟ ನಕ್ಷತ್ರದಲ್ಲಿ ಕೆಟ್ಟ ಕಾಲದಲ್ಲಿ. ಆದ್ದರಿಂದ ಇದು ತಂದೆಗೆ ಅಥವಾ ತಾಯಿಗೆ ಪ್ರಾಣಕ್ಕೇ ಸಂಚಕಾರ ಬರುವ ಸಂಭವವಿದೆ. ನಾನು ಅದಕ್ಕಾಗಿಯೇ ಎರಡು ಬಾರಿ ಲೆಕ್ಕಾಚಾರ ಮಾಡಿ ನೋಡಿದೆ" ಎಂದು ಹೇಳಿದ ಜ್ಯೋತಿಷ್ಯರು, ಪರ್ವತ ಶಿಖರದಿಂದ ಕುಸಿದು ಬಿದ್ದಂತಾಗಿರುವ ನಿಮ್ಮ ಮನಸ್ಥಿತಿಯನ್ನು ಚಹರೆಯಿಂದಲೇ ಕಂಡುಹಿಡಿದು—'ಆದರೂ ಹೆದರಬೇಕಿಲ್ಲ, ಇದಕ್ಕೆ ಪರಿಹಾರವೂ ಇಲ್ಲದಿಲ್ಲ. ಸುದರ್ಶನ ಹೋಮ, ನವಗ್ರಹ ಜಪ, ಸೂರ್ಯ ನಮಸ್ಕಾರ........ ಇವೆಲ್ಲಾ ನಿಮಗೆ ಖಂಡಿತ ಗಂಡಾಂತರದಿಂದ ಪಾರುಮಾಡಬಲ್ಲರು. ನಾನೇ ಆ ಬಗೆ ಬೇಕಿದ್ದರೆ ವ್ಯವಸ್ಥೆ ಮಾಡಿಸುತ್ತೇನೆ. . . ." ಇತ್ಯಾದಿ ಹೇಳುತ್ತಿದ್ದಾರೆ. ಆದರೆ ಅವೆಲ್ಲಾ

ನಿಮ್ಮ ಕಿವಿಯನ್ನು ಹೊಕ್ಕು ಮಸ್ತಿಷ್ಕಕ್ಕೆ ತಲುಪುತ್ತಲೇ ಇಲ್ಲ. ಕಿವಿಯಲ್ಲಿ ಅವರ ಮಾತುಗಳು ಕಾದ ಸೀಸವನ್ನು ಸುರಿದಂತೆ, ಸಹಸ್ರ ಸಹಸ್ರ ಕ್ರೂರ ಮೃಗಗಳ ಘರ್ಜನೆ ಮೊರೆದಂತೆ ಕೇಳಿಸುತ್ತಿದೆ. ಶರೀರದ ಶಕ್ತಿಯೆಲ್ಲಾ ಸೋರಿಹೋಗಿ ನಿತ್ರಾಣರಾಗುತ್ತೀರಿ. ಹೇಗೋ ಸಾವರಿಸಿಕೊಂಡು ಮನೆಗೆ ಬಂದು ಮಂಚದ ಮೇಲೆ ಕುಸಿಯುತ್ತೀರಿ. ನಿಮ್ಮ ಹತಾಶೆ ನಿಧಾನವಾಗಿ ಪರಿವರ್ತನೆಗೊಂಡು ಕ್ರೋಧವಾಗಿ ಬಿಡುತ್ತದೆ. ಆದರೆ ಅದರ ಬಲಿಪಶು ಯಾರು? ಸ್ವಲ್ಪ ಸಮಯ ಹಿಂದಿನವರೆಗೆ ನಿಮ್ಮನ್ನು ಸುಖ-ಸಂತೋಷಗಳ ತೂಗುಯ್ಯಾಲೆಯಲ್ಲಿ ತೂಗಿ, 'ಸ್ವರ್ಗಕ್ಕೆ ಮೂರೇ ಗೇಣು' ಎಂಬ ಅನುಭವನ್ನಿತ್ತಿದ್ದ, ಸ್ವತಃ ನಿಮ್ಮ ಆ "ಕುಲೋದ್ಧಾರಕ".

ಈ ಮೇಲಿನ ನಾಲ್ಕು ಘಟನೆಗಳಂಥವು ನಿಮ್ಮ ಅಥವಾ ನಿಮ್ಮ ಪರಿಚಿತ, ಬಂಧು-ಮಿತ್ರರ ಜೀವನದಲ್ಲಿ ಒಂದಾದರೂ ಸಂಭವಿಸಿರಬಹುದು, ಆಗ ನಿಮಗೆ ಈ ವ್ಯವಸ್ಥೆಯ ಬಗೆಗೆ ಮೂಡಿದ ಭಾವನೆಯೇನು? ಮೊದಲನೆಯದಾಗಿ ಶಕುನಗಳನ್ನು ನಂಬುವ ನಿಮ್ಮ ಮನಸ್ಥಿತಿಯಿಂದ ಮನಸ್ಸಿನಲ್ಲಿ ಅಶಾಂತಿ, ಕಾರ್ಯಕ್ರಮಗಳಲ್ಲಿ ಏರುಪೇರು ಅಲ್ಲದೆ ಮತ್ತೇನು ಸಾಧಿಸಬಲ್ಲಿರಿ? ಈ ಶಕುನಗಳನ್ನು ನಂಬುವುದರಿಂದ ಅನೇಕರ ಜೀವನದ ಮಹತ್ವದ ಕ್ಷಣಗಳು ಜಾರಿಹೋಗಿವೆ. ಸುವರ್ಣಾವಕಾಶಗಳಿಂದ ವಂಚಿತರಾಗಿ ದುಃಖ-ಕಷ್ಟಗಳಿಗೆ ಸಿಕ್ಕಿದ್ದಾರೆ. ಬೆಕ್ಕು, ವಿಧವಾ ಸ್ತ್ರೀ, ಒಂಟಿ ಬ್ರಾಹ್ಮಣ, ಕಟ್ಟಿಗೆ ಹೊರೆ ಹೊತ್ತವ ಇತ್ಯಾದಿ ಅನೇಕ ರೀತಿಯ ಅಪಶಕುನಗಳೆಂದು ಹೇಳಲಾದ ಘಟನೆಗಳು ನಮ್ಮ ಪ್ರಯಾಣದ ಸಮಯದಲ್ಲಿ ಎದುರಾಗಬಹುದು. ಸುಮಂಗಲೆಯಾದ ಸ್ತ್ರೀ, ಇಬ್ಬರು ಬ್ರಾಹ್ಮಣರು, ಹೆಂಡದ ಮಡಕೆಯನ್ನು ಹೊತ್ತವ-ಇತ್ಯಾದಿ ಎದುರಾದರೆ ಶುಭ ಶಕುನವಂತೆ. ಇವುಗಳ ಬಗ್ಗೆ ಯೋಚನೆ ಮಾಡುವ ಶಕ್ತಿಯನ್ನೇ ನಾವು ಕಳೆದುಕೊಂಡಿದ್ದೇವೆಯೇ? ನಿಮ್ಮ ಕೆಲಸ ವಿಫಲವಾಗುವುದು ನೀವು ಅದನ್ನು ಶ್ರದ್ಧೆ, ಉತ್ಸಾಹ, ಮುಂದಾಲೋಚನೆಗಳಿಂದ ಮಾಡದುದ್ದಕ್ಕೋ ಅಥವಾ ಬೆಕ್ಕು ಎದುರಾದುದಕ್ಕೋ? ಒಂಟಿ ಬ್ರಾಹ್ಮಣ ನಿಮ್ಮ ಕಾರ್ಯದಲ್ಲಿ ವಿಫಲತೆಯನ್ನುಂಟುಮಾಡಲು ಶಕ್ತನಾದರೆ, ಇಬ್ಬರು ಹೇಗೆ ಸಫಲತೆ ತಂದುಕೊಡಬಲ್ಲರು. ವಿಧವೆ ಅನೇಕ ಬಾರಿ ಹೀಗೆ ಎದುರಾಗಿ ನಿಂದನೆಗೀಡಾಗುವುದೂ ಇದೆ. ವಿಧವೆಯಾದುದು ಆಕೆಯ ತಪ್ಪೇ? ನೀವು ನಿಂದಿಸಿದರೆ ಕಾರ್ಯ ಸರಿಹೋಗುವುದೇ? ಅಥವಾ ನಿಮ್ಮ ಕಾರ್ಯದಲ್ಲಿ ವಿಫಲತೆ ಸ್ವತಃ ಸಿದ್ಧವಾದುದರಿಂದ ಆಕೆ ಎದುರಾಗಿದ್ದಾಳೆ ಎಂದೇಕೆ ಭಾವಿಸಬಾರದು? ಅನೇಕರು ಶುಭ ಶಕುನಗಳನ್ನು ತಾವಾಗಿಯೇ ನಿರ್ಮಿಸಿಕೊಳ್ಳುವ ಚೋದ್ಯವೂ ಆಗಾಗ್ಗೆ ನಡೆಯುತ್ತದೆ. ಇವೆಲ್ಲದರ ಫಲಿತಾಂಶವೆಂದರೆ ಮನುಷ್ಯ ತನ್ನ ಬುದ್ಧಿ, ಕೌಶಲ, ಪರಿಶ್ರಮಗಳಿಂದಲೇ ಕಾರ್ಯಸಿದ್ಧಿಯಾಗುವುದೆಂಬುದನ್ನು ಮರೆತಿದ್ದಾನೆ. ಯೋಗವಾಸಿಷ್ಟದಲ್ಲಿ ಹೇಳಿರುವಂತೆ—

ಉದ್ಯಮಃ ಸಾಹಸಂ ಧೈರ್ಯಂ ಬಲಂ ಬುದ್ಧಿಃ ಪರಾಕ್ರಮಃ ।
ಷಡೇತೇ ಯತ್ರ ತಿಷ್ಠಂತಿ ತತ್ರ ದೇವೋ ಸಹಾಯಕೃತ್ ॥

"ಉದ್ಯಮಶೀಲತೆ, ಸಾಹಸ, ಧೈರ್ಯ, ಬಲ, ಬುದ್ಧಿ, ಪರಾಕ್ರಮ-ಈ ಆರು ಇರುವಲ್ಲೇ ದೈವಸಹಾಯ ಅರ್ಥಾತ್ ಕಾರ್ಯಸಿದ್ಧಿಯಾಗುತ್ತದೆ" ಇಲ್ಲಿ ಹೇಳಿರುವ ಮಾತು ಹೆಚ್ಚು ಸೂಕ್ತವೋ, ಶಕುನವಿದರ ಮಾತು ಸತ್ಯವೋ ಎಂಬುದನ್ನು ನಾವು ವಿಚಾರಿಸುವವರಾಗಬೇಕಲ್ಲವೇ?.

ಇನ್ನು ಎರಡನೆಯದಾಗಿ ಪರೀಕ್ಷೆ ಇತ್ಯಾದಿಗಳಲ್ಲಿ ಭವಿಷ್ಯದ ಬಗ್ಗೆ ತಿಳಿಯುವುದ ರಿಂದಲೇ ವಿದ್ಯಾರ್ಥಿಗಳ ಚೈತನ್ಯ ಕುಸಿಯುತ್ತದೆ. ವಿದ್ಯಾರ್ಥಿಯು "ನನ್ನ ಪರೀಕ್ಷೆಯ ಫಲಿತಾಂಶ ನನ್ನ ಪರಿಶ್ರಮ ಪೂರ್ವಕ ಅಧ್ಯಯನದ ಮೇಲೆ ಅವಲಂಬಿತವಾಗಿದೆಯೇ ಹೊರತು ಯಾವುದೇ ಗ್ರಹದ ಗತಿಗನುಗುಣವಾಗಿಯಲ್ಲ. ಅನೇಕ ಪರೀಕ್ಷೆಗಳು ರಾಹುಕಾಲದಲ್ಲಿ ಪ್ರಾರಂಭವಾಗುತ್ತವೆ. ಅದರಲ್ಲಿ ಪರೀಕ್ಷೆಯನ್ನು ಎದುರಿಸಿದವರೆಲ್ಲರೂ ನಪಾಸು ಆಗುವರೇ ? ಹಾಗಿದ್ದಲ್ಲಿ ರಾಹುಕಾಲದ ಬಗಗಿನ ಅಲ್ಲಸಲ್ಲದ ಮಹತ್ವವೇಕೆ? ರಾಹುಕಾಲದಲ್ಲಿ ಅನೇಕ ರೈಲು–ಬಸ್ಸುಗಳು ಪ್ರತಿನಿತ್ಯ ಹೊರಡುತ್ತವೆ; ಹಾಗಿದ್ದಲ್ಲಿ, ಅವೆಲ್ಲಾ ಅಪಘಾತಕ್ಕೀಡಾಗು ವುದೇ? ಇದೆಲ್ಲವನ್ನೂ ನಾವೆಲ್ಲಾ ಏಕೆ ಯೋಚಿಸುವುದಿಲ್ಲ?

ವಿವಾಹ ಸಂದರ್ಭಗಳಲ್ಲಿ ಅತಿ ಮುಖ್ಯವಾದ ಪಾತ್ರವಹಿಸುವ ಜಾತಕಗಳ ಬಗೆ ಗಾದರೂ ಈ ಮಾತು ಅನ್ವಯಿಸುತ್ತದೆ. ವಿವಾಹವೆಂದರೆ ಪ್ರಾಪ್ತವಯಸ್ಕರಾದ ಗಂಡು-ಹೆಣ್ಣು ಗಳು ತಮ್ಮ ಗುಣ-ಕರ್ಮ-ಸ್ವಭಾವಗಳಿಗನುಸಾರವಾದ ಬಾಳ ಸಂಗಾತಿಗಳನ್ನು ಸ್ವತಃ ಆಯ್ದುಕೊಳ್ಳಬೇಕು. ಹಿರಿಯರ ಸಲಹೆ ಪಡೆಯಬೇಕು ನಿಜ. ಹಿರಿಯರೂ ಸಹ ಇದರಲ್ಲಿ ಪಾತ್ರವನ್ನು ಯೋಗ್ಯರೀತಿಯಲ್ಲಿ ನಿರ್ವಹಿಸಬೇಕು. ಇಂದು ಹೆಚ್ಚಿನ ಹಿರಿಯರು ತಮ್ಮ ಪ್ರತಿಷ್ಠೆ, ಹಣಕಾಸಿನ ವ್ಯವಹಾರ (ವರದಕ್ಷಿಣೆ), ಜಾತಿ–ಮತಗಳ ಬಗ್ಗೆ ಹೆಚ್ಚಿನ ಪ್ರಾಮುಖ್ಯ ಕೊಡುತ್ತಾರೆ. ಅದಕ್ಕಿಂತ ಹೆಚ್ಚಿಗೆ ಜಾತಕಗಳಿಗೆ ಸಲ್ಲದ ಮಹತ್ವವೀಯುವುದು. ಜಾತಕಗಳಿಂದ ಹೆಚ್ಚಿನ ಕಷ್ಟಕ್ಕೊಳಗಾಗುವುದು ಹೆಣ್ಣು ಮತ್ತು ಹೆಣ್ಣು ಹೆತ್ತವರು. ಮೂಲಾ ನಕ್ಷತ್ರದಲ್ಲಿ ಹುಟ್ಟಿದ ಹುಡುಗಿ ಮಾವನನ್ನೂ, ವಿಶಾಖ ನಕ್ಷತ್ರದಲ್ಲಿ ಹುಟ್ಟಿದ ಹುಡುಗಿ ಭಾವ (ಗಂಡನ ಅಣ್ಣ)ನನ್ನೂ, ಆಶ್ಲೇಷಾ ನಕ್ಷತ್ರದಲ್ಲಿ ಹುಟ್ಟಿದ ಹುಡುಗಿ ಮೈದುನ ನನ್ನೂ ಕೊಲ್ಲುತ್ತಾಳಂತೆ ಎಂದರೆ ಅವರಿಗೆ ಸಾವಿನ ಮೂಲವಾಗುತ್ತಾಳೆ. ಹೀಗೆ ಎಲ್ಲಾ ಅನಿಷ್ಟಗಳೂ ಹೆಣ್ಣಿನಿಂದ ಗಂಡಿಗೆ ಇವೆಯಲ್ಲದೆ, ಗಂಡಿನಿಂದ ಹೆಣ್ಣಿಗೆ ಆಗುವುದು ಯಾವುದೂ ಇಲ್ಲ, ಅಥವಾ ಅದು ಪ್ರಸಿದ್ಧವಾಗಿಲ್ಲ. ಈ ರೀತಿ ಗಂಡಿನ ಕಡೆಯವರು ಹೆಣ್ಣಿನ ಕಡೆಯುವ ರನ್ನು ಶೋಷಿಸಲು ನಿರ್ಮಿಸಿರುವ ಷಡ್ಯಂತ್ರವೇ ಜಾತಕ. ಜಾತಕ ಕೂಡಿ ಬಂದಿದೆ ಎನ್ನಲಾದ ಅನೇಕ ವಿವಾಹಗಳು ವಿರಸ ದಾಂಪತ್ಯಗಳಾಗಿವೆ. ಜಾತಕ ಪ್ರತಿಕೂಲವೆನಿಸಿದ ವಿವಾಹಗಳು ಅನುಕೂಲ ದಾಂಪತ್ಯ ನಡೆಸಿರುವುದನ್ನೂ ನೋಡಬಹುದಾಗಿದೆ. ಹೀಗಿರುವಾಗ ಜಾತಕ ಗಳನ್ನು ಅವಾಸ್ತವಿಕವಾಗಿ ಅವಲಂಬಿಸಿರಬಾರದು-ಎಂಬ ವಿವೇಕ ನಮ್ಮಲ್ಲಿ ಇನ್ನಾದರೂ ಉದಯವಾದಲ್ಲಿ ನಮ್ಮ ಪ್ರಚಲಿತ ವಿವಾಹ ಪದ್ಧತಿಯ ದೊಡ್ಡ ಅನಿಷ್ಟ ನಿವಾರಣೆಯಾದೀತು!

ಮಕ್ಕಳು ಕೆಲವು ಕೆಟ್ಟ ನಕ್ಷತ್ರಗಳಲ್ಲಿ ಹುಟ್ಟಿರುವುದೆಂದು ತಿಳಿದಕೂಡಲೇ ಆ ಮಕ್ಕಳನ್ನು ದ್ವೇಷಿಸುವ ತಾಯ್ತಂದೆಯರಿದ್ದಾರೆ. ಅಪಾರವಾದ ಪ್ರೀತಿಯ ವರ್ಷವನ್ನೇ ಸುರಿಸಬೇಕಾದ ಹೆತ್ತವರು ಆ ಕೂಸನ್ನು ತಮ್ಮ ನಂ. 1 ವೈರಿಯ ಸ್ಥಾನದಲ್ಲಿರಿಸುತ್ತಾರೆ. ಅನೇಕ ತಾಯಂದಿರೇ ತಮ್ಮ ಕರುಳ ಕುಡಿಯನ್ನು ಕೊಂದ ಘಟನೆಗಳು ಇಲ್ಲದಿಲ್ಲ. ಇವೆಲ್ಲಕ್ಕೂ ಕಾರಣ ಜನ್ಮಕಾಲದ ಗ್ರಹಗತಿಗಳ ಬಗೆಗಿನ ಅವಾಸ್ತವ ಕಲ್ಪನೆಯಲ್ಲದೆ ಮತ್ತೇನು? ಗ್ರಹ ಗಳು ಮನುಷ್ಯನ ಜೀವನದಲ್ಲಿ ಪ್ರಭಾವ ಬೀರುವುದು ಯಾವ ರೀತಿ? ಸೂರ್ಯ ಚಂದ್ರಾದಿ ಗಳು ಎಲ್ಲಾ ವ್ಯಕ್ತಿಗಳಿಗೂ ಸಮಾನ ರೀತಿಯ ಪರಿಣಾಮ ನೀಡುತ್ತದೆ. ಒಂದೇ ಕ್ಷಣದಲ್ಲಿ

ಅಸಂಖ್ಯಾತ ಶಿಶುಗಳು ಜನ್ಮತಾಳುತ್ತವೆ. ಅವೆಲ್ಲದರ ಗ್ರಹಗತಿ ಹಾಗೂ ಪರಿಣಾಮ ಒಂದೇ ಆಗಿರಬೇಕಲ್ಲವೇ? ಆದರೆ ಹಾಗಾದುದಕ್ಕೆ ಒಂದೇ ಒಂದು ಉದಾಹರಣೆಯೂ ನಮಗೆ ದೊರೆಯದು. ಯಾವ ಇಬ್ಬರೂ ಒಂದೇ ರೀತಿಯಲ್ಲಿ ನೋಡಲು ಸಿಕ್ಕರು. ಹೀಗಿರುವಾಗ ಈ ಜನ್ಮಕುಂಡಲಿಯನ್ನು ನಂಬುವುದು ಅವಿವೇಕವಲ್ಲದೆ ಮತ್ತೇನು? ಕಾರ್ಯದ ಯಶಸ್ಸು ಗ್ರಹಗತಿಗಳಿಂದಲ್ಲ, ಸ್ವತಃ ಪುರುಷಾರ್ಥದಿಂದ–ಎಂಬುದಾಗಿ ವೇದಗಳು ಸಾರುತ್ತಿವೆ. ನೋಡಿರಿ:

**ಸ್ವಯಂ ವಾಜಿನ್ ತನ್ವಂ ಕಲ್ಪಯಸ್ವ, ಸ್ವಯಂ ಯಜಸ್ವ**
**ಸ್ವಯಂ ಜುಷುಸ್ವ । ಮಹಿಮಾ ತೇಽನ್ಯೇನ ನ ಸನ್ನಶೇ ॥**

"ಹೇ ಶಕ್ತಿಶಾಲಿಯಾದ ಜೀವಾತ್ಮ! ಸ್ವತಃ ಶರೀರವನ್ನು ದೃಢಪಡಿಸಿಕೋ. ಸ್ವತಃ ಯಜ್ಞ ಅರ್ಥಾತ್ ಸತ್ಕರ್ಮ ಮಾಡು, ಸ್ವತಃ ಹರ್ಷಿಸು. ಬೇರೆಯವನಿಂದ ನಿನ್ನ ಮಹಿಮೆ ಸಿದ್ಧಿಸದು".

ಈ ಒಂದು ವೇದಮಂತ್ರವು ಸದಾ ನಮ್ಮ ಸ್ಮೃತಿಪಟಲದಲ್ಲಿ ಉಳಿದಿದ್ದರೆ ಗ್ರಹಗತಿಗಳ, ಶಕುನಗಳ, ಜಾತಕಗಳ ಬಗೆಗಿನ ಭ್ರಾಂತಿಯಿಂದ ಪಾರಾಗಬಲ್ಲೆವು. ವಸ್ತುತಃ ಆಲಸಿಗಳ, ವೈಗಳ್ಳರ, ಬುದ್ಧಿಶತ್ರುಗಳ ಹಾಗೂ ದುರ್ಬಲರ ಶೋಷಕರ ಕೈಯ ಆಯುಧಗಳಿವು. ಇವು ನಮ್ಮ ಸಮಾಜವನ್ನು ವಿನಾಶದತ್ತ ಕೊಂಡೊಯ್ಯುತ್ತಿದೆ. ಇವುಗಳ ಭ್ರಾಂತ ಬಲೆಯಲ್ಲಿ ಸ್ತ್ರೀ ಪುರುಷರೆನ್ನದೆ, ಪಂಡಿತ–ಪಾಮರರೆನ್ನದೆ ಎಲ್ಲಾ ಜಾತಿಯ, ಎಲ್ಲಾ ವರ್ಗದ, ಎಲ್ಲಾ ದೇಶದ ಜನರೂ ಸಿಲುಕಿದ್ದಾರೆ. ಎಂದಿನಿಂದ ಭಾರತೀಯರು ಈ ಜ್ಯೋತಿಷ್ಯಾದಿ ಭ್ರಾಂತಿಗಳಲ್ಲಿ ತೊಡಗಿಸಲ್ಪಟ್ಟರೋ, ಅಂದಿನಿಂದಲೇ ಅವರ ಪುರುಷಾರ್ಥ ಹೀನತೆ ವಿಜೃಂಭಿಸ ತೊಡಗಿತು. ನಾವು ಮತ್ತೆ ಪುರುಷಾರ್ಥಿಗಳಾಗಿ, ಪ್ರಾಚೀನ ವೈಭವವನ್ನು ಮತ್ತೊಮ್ಮೆ ನೆಲೆಗೊಳಿಸುವಂತೆ ಮಾಡುವ ವಿವೇಕವನ್ನು ಭಗವಂತನು ನಮಗೆಲ್ಲರಿಗೂ ನೀಡಲಿ.

---

# ನಿರ್ಭಯತೆ ನಿಮ್ಮದಾಗಲಿ

● ಪ್ರೊ॥ ಸುರೇಶಚಂದ್ರ ವೇದಾಲಂಕಾರ

**ಮಾ ಭೇರ್ಮಾ ಮಾ ಸಂ ವಿಕ್ಥಾಃ ॥** [ಯಜು: ೧-೨೩]

"[ಮಾ ಭೇಃ] ಭಯ ಪಡದಿರು. [ಮಾ ಸಂವಿಕ್ಥಾಃ] ಗಾಬರಿಯಾಗದಿರು."

ಭಯ ಮತ್ತು ಗಾಬರಿ ಒಂದಿನ್ನೊಂದರ ಸಂಗಾತಿಗಳು. ನಾವು ಭಯಭೀತರಾದಾಗ ಆ ಭಯದಿಂದ ನಾವು ಎಷ್ಟೊಂದು ಪರವಶರಾಗುತ್ತೇವೆಂದರೆ ಭಯದಿಂದಾಗಿ ನಮಗೆ ಏನು ಮಾಡಲೂ ತೋರುವುದಿಲ್ಲ. ಹಾಗೂ ಆಪತ್ತಿನಿಂದ ಪಾರಾಗುವ ಎಲ್ಲಾ ಅವಕಾಶಗಳನ್ನೂ ಕಳೆದುಕೊಳ್ಳುತ್ತೇವೆ. ಆದ್ದರಿಂದಲೇ 'ಹೆದರಿದವ ಸತ್ತ, ಗಾಬರಿಯಾದವ ಸೋತ' ಎಂಬರ್ಥ ಬರುವ ಮಾತೊಂದು ಹಿಂದೀ ಭಾಷೆಯಲ್ಲಿದೆ. ಭಾರತದಲ್ಲಿ ಬಹಳಷ್ಟು ಹಾವುಗಳಿವೆ. ಆಗಾಗ್ಗೆ ಅವು ಕಚ್ಚುವುದೂ ಇದೆ. ಆದರೆ ವಿಷಸರ್ಪಗಳ ಕಡಿತದಿಂದ ಸಾಯುವ

ವುದಕ್ಕಿಂತಲೂ ಹೆಚ್ಚು ಜನರು, ಸರ್ಪಕಡಿತದ ಭಯದಿಂದ ಸಾಯುತ್ತಾರೆ—ಎಂಬುದು ಸೋಜಿಗದ ಸಂಗತಿಯಾದರೂ ಸತ್ಯಸ್ಯ ಸತ್ಯವಾಗಿದೆ. ಪ್ಲೇಗ್ (ಹಳೇಮೈಸೂರಿನ ಗ್ರಾಮ್ಯ ಭಾಷೆಯಲ್ಲಿ 'ಪಿಳೇಕಮ್ಮ')ನಿಂದಾಗಿ ಹಿಂದೆ ನಮ್ಮ ದೇಶದಲ್ಲಿ ಬಹಳಷ್ಟು ಜನರು ಸಾಯುತ್ತಿದ್ದರು. ಈ ಬಗ್ಗೆ ಬಹಳ ಸೊಗಸಾದ ಕಥೆಯೊಂದಿದೆ. ಒಂದು ಬಾರಿ ಈ 'ಪಿಳೇಕಮ್ಮ' ಯಾವುದೋ ಒಂದು ಊರಿನಿಂದ ಬರುತ್ತಿದ್ದಳು. ಆಗ ಒಬ್ಬ ಯಾತ್ರಿಕ ಎದುರಿಗೆ ಬಂದನು. "ಓಹೋ! ಏನ್ ಪಿಳೇಕಮ್ನೋರೇ! ಎಷ್ಟು ಜನಾನ ಬಲಿ ತಗೊಂಡಿರಿ?" ಎಂದು ಕೇಳಿದನು. ಆಗ ಆ ಪ್ಲೇಗ್ ಮಾರಿ ಹೇಳಿದಳು:—"ನೋಡು ತಮ್ಮ! ನಾನೇನೋ ಮೂರು ನಾಲ್ಕು ಜನರಿಂದಲೇ ತೃಪ್ತಳಾಗುವವಳು. ಆದರೆ ನೂರಾರು, ಸಾವಿರಾರು ಜನರು ರೋಗ ತಗಲದಿದ್ದರೂ ನನ್ನ ಹೆದರಿಕೆಯಿಂದಲೇ ಸತ್ತುಹೋದರು."

ಇದು ಒಂದು ಕಥೆ ಮಾತ್ರ, ಆದರೆ ಇದರಲ್ಲೊಂದು ತಥ್ಯವಿದೆ. ಭೀತಿಯಿಂದಲೇ ಜನರು ಸಾಯುತ್ತಾರೆ—ಎಂಬುದು ಮಾತ್ರ ಸತ್ಯ. ನಿಮ್ಮ ಮನೆಯಲ್ಲಿ ಸರ್ಪವೊಂದು ನುಸುಳಿದೆಯೆಂದು ಭಾವಿಸಿರಿ. ಸ್ವಲ್ಪ ಧೈರ್ಯವಹಿಸಿ, ಗಾಬರಿಗೊಳ್ಳದೆ ಕೆಲಸ ಮಾಡಿದರೆ ಅದನ್ನು ಓಡಿಸಬಲ್ಲಿರಿ ಅಥವಾ (ನಿರ್ವಾಹವಿಲ್ಲದಾಗ) ಕೊಂದುಹಾಕಬಲ್ಲಿರಿ. ನಾನೊಬ್ಬ ಮಹಿಳೆಯನ್ನು ಬಲ್ಲೆ. ಆಕೆ ಮನೆಗೆ ಸರ್ಪ ನುಗ್ಗಿದುದನ್ನು ನೋಡಿದಳೆಂದರೆ ಬೊಬ್ಬೆ ಹಾಕಿ ಆಚೀಚೆ ಓಡುತ್ತಾಳೆ. ಆಗ ಸರ್ಪ ಸಹಜವಾಗಿಯೇ ಗಾಬರಿಯಾಗಿ ಸಂದು-ಗೊಂದುಗಳಲ್ಲಿ ಅಡಗುತ್ತದೆ. ಹಿಡಿಯುವುದೂ ಸಹ ಕಷ್ಟಕರವಾಗುತ್ತದೆ. ಮನೆಗೆ ಕಳ್ಳರು ನುಗ್ಗಿದರೆಂದು ಗಾಬರಿಯಾಗಬೇಡಿರಿ; ಧೈರ್ಯಗೆಡಬೇಡಿರಿ. ಅದೇರೀತಿ ನೀವು ಗಾಬರಿಗೊಂಡು, ಓಡತೊಡಗಿದಿರಾದರೆ ನಾಯಿಗಳು ನಿಮ್ಮನ್ನು ಅಟ್ಟಿಸಿಕೊಂಡು ಒಂದು ಕಾಲನ್ನು ಕಚ್ಚಬಹುದು. ಗಾಬರಿಗೊಳ್ಳದೆ ಒಂದು ಕಲ್ಲನ್ನು ಅದರತ್ತ ಬಿಸುಡಿದರೆ ಅಥವಾ ಕೋಲನ್ನೆತ್ತಿ ತೋರಿಸಿ ಧೈರ್ಯದಿಂದ ಅದರತ್ತ ಸಾಗಿದರೆ ಅವು ಹೆದರಿ ಓಡಿಹೋಗುತ್ತವೆ.

ಭೂತ-ಪ್ರೇತಗಳ ಬಗೆಗೂ ಅಷ್ಟೇ! ಇವುಗಳ ಭೀತಿಯಿಂದ ಮನುಷ್ಯರ ಜೀವನ ನರಕಕೂಪವಾಗುವುದೂ ಉಂಟು. ಇವೆಲ್ಲಾ ಕಲ್ಪನೆಯಲ್ಲೇ ಹುಟ್ಟಿ ಅಲ್ಲೇ ಬೆಳೆಯುವಂತಹವು. ಸ್ವತಃ ಅಸ್ತಿತ್ವವೇ ಇಲ್ಲದ ಈ ಭೂತ-ಪ್ರೇತಗಳಿಂದಾಗಿ ಜನರು ಪಡುವ ಕಷ್ಟನಷ್ಟಗಳನ್ನು ನೋಡಿದಾಗ ಈ ಭಯವು ಮನುಷ್ಯರನ್ನು ಎಷ್ಟೊಂದು ದುಃಖಕ್ಕೀಡುಮಾಡುತ್ತದೆಂಬುದನ್ನು ಅರಿಯಬಹುದು. "ಭೀತಿಗೆ ಮಿಗಿಲಾದ ಭೂತವಿಲ್ಲ" ಅಲ್ಲವೇ?

ಸಾಧಾರಣವಾಗಿ ಮನುಷ್ಯನು ತನಗೆ ಸಂಕಷ್ಟಗಳು ಬಂದಾಗ ಹತಾಶನಾಗುತ್ತಾನೆ ಮತ್ತು ಹೆದರಿ ಮಾಡಬೇಕಾದ ಕಾರ್ಯದಿಂದ ವಿಮುಖನಾಗುತ್ತಾನೆ. ಯಾವ ವ್ಯಕ್ತಿ ಕಷ್ಟಗಳನ್ನು ನೋಡಿ ಹೆದರುತ್ತಾನೋ, ಅವನು ಜೀವನ ಯಾತ್ರೆಯಲ್ಲಿ ತೀರಾ ಹಿಂದುಳಿಯುತ್ತಾನೆ. ಯಾವನು ಈ ಕಷ್ಟಗಳತ್ತ 'ದಿವ್ಯ ನಿರ್ಲಕ್ಷ್ಯ' ಹರಿಸಿ, ಮುಂದುವರಿಯುತ್ತಾನೋ ಅವನೇ ಯಶಸ್ವಿಯಾಗುತ್ತಾನೆ. ನಾವು ಸಹ-ಎಷ್ಟೇ ಕೀಳ್ಮಟ್ಟದಲ್ಲಿರಲಿ,— ಕಷ್ಟಗಳಿಂದ ಹೆದರದೆ, ಮನದಲ್ಲಿ ಮುಂದುವರಿಯಲೇ ಬೇಕೆಂಬ ದೃಢ ನಿಶ್ಚಯ ಮಾಡಿದ್ದುದಾರೆ, ವಿಪತ್ತುಗಳಿಂದ ಗಾಬರಿಗೊಳ್ಳದೆ ಮುಂದೆ ಸಾಗಿದರೆ ಅದ್ಭುತವಾದುದನ್ನು ಸಾಧಿಸಬಲ್ಲೆವು. ಇತಿಹಾಸವು ಈ ಮಾತಿಗೆ ಸಾಕ್ಷಿಯಾಗಿದೆ.

ಮಹಾರಾಜಾ ರಣಜಿತಸಿಂಹನ ಸೈನ್ಯಕ್ಕೂ, ಪಠಾಣರ ಸೈನ್ಯಕ್ಕೂ ಯುದ್ಧ ಏರ್ಪ ಪಟ್ಟಿತ್ತು. ಅಟಕ್ ನದಿಯ ಎರಡು ದಂಡೆಗಳಲ್ಲೂ ಎರಡೂ ಸೈನ್ಯಗಳು ಜಮಾಯಿಸಿದ್ದವು. ಎರಡೂ ಸೈನ್ಯಗಳ ನಡುವೆ ನದಿಯು ಮಹಾವೇಗದಿಂದ ಹರಿಯುತ್ತಿತ್ತು. ಅದನ್ನು ದಾಟು ವುದು ಸಾಧಾರಣ ಕಾರ್ಯವಾಗಿರಲಿಲ್ಲ. ರಣಜಿತಸಿಂಹನು ತನ್ನ ಸೇನಾಪತಿಗೆ ಸೇನೆಯೊಂದಿಗೆ ನದಿಯನ್ನು ದಾಟಲು ಆದೇಶವಿತ್ತನು. ಸೇನಾಪತಿಯು ನದಿಯತ್ತ ಬೆರಳು ತೋರಿಸಿ ಹೇಳಿ ದನು—"ಮಹಾರಾಜಾ! ಇದನ್ನು ದಾಟುವುದು ಅಸಾಧ್ಯ" ತನ್ನ ಬೆಳ್ಳಿಕೂದಲಿನ ಗಡ್ಡದಿಂದ ಕೂಡಿದ ಮುಖದಲ್ಲಿ ಯುವಜನೋಚಿತವಾದ ಮುಗುಳ್ನಗೆಯನ್ನು ಮೂಡಿಸಿ ರಣಜಿತಸಿಂಹ ನೆಂದನು—"ಅಸಾಧ್ಯ? ಅಸಾಧ್ಯ ಎಂಬ ಶಬ್ದವನ್ನೇ ನಾನರಿತವನಲ್ಲ." ಹೀಗೆಂದು ಸೊಂಟಕ್ಕೆ ಕಟ್ಟಿದ ಖಡ್ಗವನ್ನು ತೆಗೆದು ತನ್ನ ಪೇಟಾ (ಪಗಡಿ)ದಲ್ಲಿ ಕಟ್ಟಿಕೊಂಡನು. ಹಾಗೂ ತನ್ನ ಕುದುರೆಯನ್ನೇರಿ, ವೇಗವಾಗಿ ಹರಿಯುವ ನದಿಯಲ್ಲಿ ಅಶ್ವಾರೋಹಿಯಾಗಿಯೇ ಧುಮುಕಿ ದನು. ಇನ್ನೇನಿದೆ? ವೀರನ ಅನುಪಮ ಶೌರ್ಯದ ಈ ಕಾರ್ಯಕ್ಕೆ ಹೆದರಿ ನದಿಯೂ ನತಮಸ್ತಕವಾಗಿ ಹಾದಿಬಿಟ್ಟಿತು. ಅವನ ನಿಚ್ಚಳ ಸಾಹಸದಿಂದ ಉತ್ತೇಜಿತರಾದ ಸೈನಿ ಕರೂ, ನವೋತ್ಸಾಹದಿಂದ ಅವನನ್ನನುಸರಿಸಿ ಪಠಾಣರ ಮೇಲೆ ಮುಗಿಬಿದ್ದು ಅವರನ್ನು ಪರಾಜಿತರನ್ನಾಗಿ ಮಾಡಿ ತಮ್ಮ ವಿಜಯದುಂದುಭಿಯನ್ನು ಮೊಳಗಿದರು.

ಜಗತ್ತಿನಲ್ಲಿ ಯುದ್ಧದ ಸಾಮಗ್ರಿಗಳು ಒಟ್ಟುಗೂಡಿಸಲ್ಪಡುತ್ತಿವೆ. ಲಕ್ಷಾಂತರ ಜನರು ಸಾಯಲು, ಹಾಗೆಯೇ ಸಾಯಿಸಲು ಸನ್ನದ್ಧರಾಗಿದ್ದಾರೆ. ಮದ್ದುಗುಂಡುಗಳು ಮಳೆ ಯಂತೆ ಸುರಿಸಲ್ಪಡುತ್ತವೆ. ನೆಪೋಲಿಯನ್ ಮತ್ತು ಅವನ ಸೈನ್ಯದೆದುರು ದುರ್ಗಮವಾದ ಆಲ್ಫ್ಸ ಪರ್ವತಶ್ರೇಣಿಯು ಗಗನಚುಂಬಿ ಶಿಖರಗಳೊಂದಿಗೆ ನಿಂತಿದೆ. ನೆಪೋಲಿಯನ್‌ನ ಸೇನಾಧಿಕಾರಿ ಬಂದು ಹೇಳಿದ-"ಪ್ರಭೂ! ದುರ್ಗಮವಾದ ಹಿಮಮಂಡಿತ ಆಲ್ಫ್ಸ ಪರ್ವತ ವನ್ನು ದಾಟುವುದು ಅಸಂಭವ. ರಣಜಿತಸಿಂಹನಂತಹ ಮುಗುಳ್ನಗೆಯು ನೆಪೋಲಿಯನ್‌ನ ಮುಖದ ಮೇಲೆ ಲಾಸ್ಯವಾಡಿತು. "ಅಸಂಭವ, ಅಸಾಧ್ಯ-ಎಂಬ ಶಬ್ದ ನನ್ನ ಶಬ್ದಕೋಶ ದಲ್ಲಿಯೇ ಇಲ್ಲ" ಹೀಗೆಂದು ಹೇಳಿ ತಾನು ಸ್ವತಃ ಧೀರಗಂಭೀರನಾಗಿ ಮುಂದೆ ಸಾಗಿದನು. ಸೈನ್ಯವೂ ಅನುಸರಿಸಿ ಆಲ್ಫ್ಸಪರ್ವತವನ್ನು ಹಾದು ವಿಜಯಗಳಿಸಿತು.

ಫ್ರಾನ್ಸ್ ಮತ್ತು ಇಂಗ್ಲೆಂಡ್‌ಗಳ ನಡುವೆ ಯುದ್ಧ ನಡೆಯುತ್ತಿತ್ತು. ಇಂಗ್ಲಿಷರ ಕೈಮೇಲಾಗಿತ್ತು. ಫ್ರಾನ್ಸಿನ ಸೈನಿಕರು ಒಬ್ಬರಾದ ಮೇಲೊಬ್ಬರು ಯುದ್ಧರಂಗದಿಂದ ಪಲಾಯನ ಮಾಡುತ್ತಿದ್ದರು. ಓಡುತ್ತಿರುವ ಸೈನಿಕರನ್ನು ಕುರಿತು ಕುರಿಕಾಯುವ ಓರ್ವ ಸಾಧಾರಣ ಕನ್ಯೆಯು 'ಏಕೆ ಓಡುತ್ತಿರುವಿರೆಂದು ಕೇಳಿದಳು—ಆಗ ಅವರೆಂದರು—ನೀನೂ ನಮ್ಮ ಜೊತೆ ಓಡು, ಇಂಗ್ಲಿಷರ ಸೇನೆ ಬರುತ್ತಿದೆ, ನಿನ್ನನ್ನೂ ಕೊಂದುಹಾಕುವರು." ಕೇವಲ ಹದಿನಾರು ವರ್ಷದ ಆ ಕಿಶೋರಿ ಧೈರ್ಯದಿಂದ ನುಡಿದಳು "ಇಂಗ್ಲೀಷರ ಸೇನೆ ಬಂದರೇನಾ ಯಿತು? ನನ್ನ ಕೈಯಲ್ಲೊಂದು ಖಡ್ಗವನ್ನು ಕೊಡಿ. ಆಗ ನೋಡಿರಿ, ಎಂತಹ ಚಮತ್ಕಾರ ತೋರಿಸುತ್ತೇನೆಂದು''. ಈ ರೀತಿ ನುಡಿದು ಸಿಂಹ ಧೈರ್ಯದಿಂದ ಖಡ್ಗವನ್ನು ಹಿಡಿದು ಇಂಗ್ಲೀಷ್ ಸೈನಿಕರ ಮೇಲೆ ಮುಗಿಬಿದ್ದಳು. ಆ ಚಿಕ್ಕ ಪ್ರಾಯದ ಹೆಣ್ಣುಮಗಳ ಪರಾಕ್ರಮ ವನ್ನು ಕಂಡು ಫ್ರಾನ್ಸ್‌ನ ಸೈನಿಕರಿಗೆ ತಮ್ಮ ಕೃತ್ಯದ ಬಗ್ಗೆ ನಾಚಿಕೆಯೆನಿಸಿತು. ನವೀನ

ಸಾಹಸದಿಂದ ಅವರೂ ಯುದ್ಧರಂಗಕ್ಕೆ ಮರಳಿದರು. ಆಗ ಫ್ರಾನ್ಸ್, ಇಂಗ್ಲೆಂಡಿನ ವಿರುದ್ಧ ಜಯಗಳಿಸಿತೆಂಬುದಕ್ಕೆ ಇತಿಹಾಸ ಸಾಕ್ಷಿಯಾಗಿದೆ. ಅದೇ ಹುಡುಗಿ 'ಜೋನ್ ಆಫ್ ಆರ್ಕ್' ಈಕೆಯನ್ನು ಇಂದಿಗೂ ಫ್ರಾನ್ಸಿನ ಸ್ವಾತಂತ್ರ್ಯ ದೇವಿಯೆಂದು ಗೌರವಿಸಲಾಗುತ್ತದೆ.

ವಿಪತ್ತುಗಳು ಬಂದಾಗ ಹೆದರದೆ, ಹಿಂಜರಿಯದೆ ಧೈರ್ಯದಿಂದ ಎದುರಿಸುವ ಧೀರನಿಗೇ ವಿಜಯಲಕ್ಷ್ಮಿಯು ಮಾಲೆ ಹಾಕುವಳು. ಹೆದರಿದ ಕೂಡಲೇ ವಿಪತ್ತುಗಳು ಇಮ್ಮಡಿಗೊಳ್ಳುತ್ತವೆ. ಮತ್ತಷ್ಟು ಹೆದರಿಸುತ್ತವೆ.

ದೆಹಲಿಯಲ್ಲಿ ಬ್ರಿಟಿಷರ ಜಲಿಯನ್‌ವಾಲಾ ಬಾಗ್ ಘಟನೆಯನ್ನು ಪ್ರತಿಭಟಿಸಲು ಭಾರೀ ಮೆರವಣಿಗೆ ಹೊರಡಿಸಲಾಗಿತ್ತು. ಲಕ್ಷಾಂತರ ನರ–ನಾರಿಯರು ಅದರಲ್ಲಿ ಭಾಗವಹಿಸಿದ್ದರು. ಒಂದೆಡೆ ಅಹಿಂಸಾತ್ಮಕ ಪ್ರತಿಭಟನೆ ಸಲ್ಲಿಸುತ್ತಿರುವ ನಿರಪರಾಧೀ ಜನತೆ ಒಂದೆಡೆಯಾದರೆ, ಸೂರ್ಯನೇ ಅಸ್ತಂಗತನಾಗದಂತಹ ಸಾಮ್ರಾಜ್ಯದ ಶಸ್ತ್ರಸಜ್ಜಿತ ಸೈನಿಕರಿನ್ನೊಂದೆಡೆ. ಒಂದು ಕಡೆ ನೈತಿಕಬಲ, ಈಶ್ವರ ವಿಶ್ವಾಸ ಬಲಿದಾನಭಾವಗಳಿದ್ದರೆ, ಇನ್ನೊಂದು ಕಡೆ ಪಶುತುಲ್ಯ ಶಸ್ತ್ರಾಸ್ತ್ರಗಳನ್ನು ಹೊಂದಿದ ಪ್ರಭುತ್ವಬಲ. ಕುದುರೆಗಳನ್ನೇರಿ ಬಂದ ಸೈನ್ಯಕ್ಕೆ ಗೋಲೀಬಾರ್‌ಗೆ ಆಜ್ಞೆ ನೀಡಲಾಯಿತು. ಆದರೆ ಇದೇನಿದು? ಭೀಮಕಾಯ ಸನ್ಯಾಸಿಯೋರ್ವರು ಎಲ್ಲಿಂದ ಬಂದು ಮೆರವಣಿಗೆಯ ಅಗ್ರಭಾಗದಲ್ಲಿ ನಿಂತರು? ಅಲ್ಲಿದ್ದ ಇತರರನ್ನು ಹಿಂದಕ್ಕೆ ದೂಡಿ, ತನ್ನ ವಿಶಾಲ ಎದೆಯನ್ನು ಮುಂದೊಡ್ಡಿ–"ಈ ನಿರಪರಾಧಿಗಳ ಮೇಲೆ ಗುಂಡು ಎಸೆಯುವ ಮುನ್ನ ನಿಮ್ಮ ಗುಂಡು ನನ್ನ ಎದೆಯನ್ನು ಮೊದಲಾಗಿ ಪ್ರವೇಶಿಸಲಿ. ಸೈನಿಕರೇ, ನನ್ನನ್ನು ಮೊದಲು ಗುಂಡಿಟ್ಟು ಕೊಂದು ನಂತರ ಸತ್ಯಾಗ್ರಹಿಗಳತ್ತ ಸಾಗಿರಿ"–ಎನ್ನುತ್ತಾ ತಮ್ಮ ಕಾವಿ ಅಂಗಿಯ ಗುಂಡಿಗಳನ್ನು ಬಿಚ್ಚಿ ನಿಂತರು. ಅವರ ನಿರ್ಭೀತ ಸಾಹಸವನ್ನು ಕಂಡ ಬಂದೂಕುಗಳು ನತಮಸ್ತಕವಾದವು. ನೈತಿಕಬಲ, ಆತ್ಮಿಕ ಬಲದೆದುರು ಪಾಶವೀ ಬಲ ಹತಪ್ರಭವಾಯಿತು. "ಸ್ವಾಮೀ ಶ್ರದ್ಧಾನಂದಕೀ ಜಯ್" ಎಂಬ ಜಯಘೋಷವು ಅಲ್ಲಿಯ ವಾಯುಮಂಡಲದಲ್ಲಿ ನಿನದಿಸಿತು.

ವೇದಗಳಂತೂ ನಿರ್ಭಯತೆಯ ಆದರ್ಶವನ್ನು ನಮ್ಮೆದುರು ನಿಲ್ಲಿಸಿವೆ. ನೋಡಿರಿ, ವೇದದಲ್ಲಿ ನಿರ್ಭಯತೆಯ ಪ್ರೇರಣೆ ಹೇಗೆ ಸಿಕ್ಕುತ್ತದೆಂಬುದನ್ನು:–

ಓಂ ಯಥಾ ದ್ಯೌಶ್ಚ ಪೃಥಿವೀಚ ನ ಬಿಭೀತೋ ನ ರಿಷ್ಯತಃ ।
ಏವಾ ಮೇ ಪ್ರಾಣ ಮಾ ಬಿಭೇಃ ॥ [ಅಥರ್ವ ೨-೧೫-೧]

"ಯಾವ ರೀತಿ ಆಕಾಶ ಭೂಮಿಗಳು ಭಯಪಡದೆ ಇರುವುದರಿಂದ ಕ್ಷೀಣವಾಗುವುದಿಲ್ಲವೋ ಅದೇ ರೀತಿ ಹೇ ನನ್ನ ಪ್ರಾಣವೇ! ನೀನೂ ಸಹ ಭಯಪಡಬೇಡ."

ಓಂ ಯಥಾಹಶ್ಚ ರಾತ್ರೀ ಚ ನ ಬಿಭೀತೋ ನ ರಿಷ್ಯತಃ ।
ಏವಾ ಮೇ ಪ್ರಾಣ ಮಾ ಬಿಭೇಃ ॥ [ಅಥರ್ವ ೨-೧೫-೨]

"ಹೇಗೆ ದಿನ ಮತ್ತು ರಾತ್ರಿಗಳು ಹೆದರದಿರುವುದರಿಂದ ಕ್ಷೀಣವಾಗುವುದಿಲ್ಲವೋ, ಹಾಗೆಯೇ, ಎಲೇ ನನ್ನ ಪ್ರಾಣವೇ ನೀನೂ ಸಹ ಭಯಪಡಬೇಡ."

ಓಂ ಯಥಾ ಸೂರ್ಯಶ್ಚ ಚಂದ್ರಶ್ಚ ನ ಬಿಭೀತೋ ನರಿಷ್ಯತಃ ।
ಏವಾ ಮೇ ಪ್ರಾಣ ಮಾ ಬಿಭೇಃ ॥ [ಅಥರ್ವ: ೨-೧೫-೩]

"ಯಾವ ರೀತಿ ಸೂರ್ಯ ಚಂದ್ರರುಗಳು ಭಯಪಡುವುದಿಲ್ಲ, ಆದಕಾರಣ ಕ್ಷೀಣವಾಗುವುದಿಲ್ಲ. ಅದೇ ರೀತಿ ಹೇ ನನ್ನ ಪ್ರಾಣವೇ । ನೀನು ಭಯಪಡದಿರು."

**ಓಂ ಯಥಾ ಬ್ರಹ್ಮ ಕ್ಷತ್ರಂ ಚ ನ ಬಿಭೀತೋ ನರಿಷ್ಯತ ।**
**ಏವಾ ಮೇ ಪ್ರಾಣ ಮಾ ಬಿಭೇ ॥** [ಅಥರ್ವ: ೨.೧೫-೪]

"ಯಾವ ರೀತಿ ಬ್ರಾಹ್ಮಣ ಮತ್ತು ಕ್ಷತ್ರಿಯರು ಹೆದರುವುದಿಲ್ಲ, ಆದುದರಿಂದ ದುರ್ಬಲರಾಗುವುದಿಲ್ಲ, ಅದೇ ರೀತಿ ಎಲೈ ನನ್ನ ಪ್ರಾಣವೇ! ನೀನು ಭಯಪಡದಿರು."

**ಓಂ ಯಥಾ ಭೂತಂ ಚ ಭವ್ಯಂ ಚ ನ ಬಿಭೀತೋ ನರಿಷ್ಯತ ।**
**ಏವಾ ಮೇ ಪ್ರಾಣ ಮಾ ಬಿಭೇ ॥** [ಅಥರ್ವ:- ೨-೧೫-೬]

"ಹೇಗೆ ಭೂತ ಮತ್ತು ಭವಿಷ್ಯ ಕಾಲಗಳು ಭಯಪಡುವುದಿಲ್ಲ. ಆದಕಾರಣ ಕ್ಷೀಣವಾಗುವುದಿಲ್ಲ. ಹಾಗೆಯೇ ಎಲೇ ನನ್ನ ಪ್ರಾಣವೇ! ಹೆದರದಿರು."

ಅಥರ್ವ ವೇದದ ಈ ಸೂಕ್ತದಲ್ಲಿ ಭಯವೇ ನಾಶದ ಕಾರಣವೆಂದು ಸ್ಪಷ್ಟವಾಗಿ ಹೇಳಿದೆ. ಆದುದರಿಂದ ಪ್ರತಿಯೊಬ್ಬನೂ ನಿರ್ಭಯತೆಯನ್ನು ಬೆಳೆಸಿಕೊಳ್ಳಬೇಕು. ಭಯಪಡುವುದರಿಂದ ನಿರ್ಬಲತೆ ಬರುತ್ತದೆ. ಯಾರು ಭಯಪಡುತ್ತಾರೋ ಅವರ ಮನಸ್ಸು, ದೇಹ, ಬುದ್ಧಿ—ಎಲ್ಲವೂ ನಿರ್ಬಲವಾಗುತ್ತವೆ. ನಿರ್ಭಯತೆಯೇ ಶಕ್ತಿಯ ರಹಸ್ಯ.

ಆದುದರಿಂದಲೇ ನಿರ್ಭಯರಾಗಿರಿ. ಸಾಹಸವನ್ನು ಕೈತಪ್ಪಲು ಬಿಡದಿರಿ. ಧೈರ್ಯವೆಂಬ ರಕ್ಷಾ ಕವಚವನ್ನು ಸದಾ ಧರಿಸಿರಿ. ಯಾರು ಹೆದರು ಪುಕ್ಕರೋ, ಯಾರು ಹೇಡಿಗಳೋ ಅವರು ಸದಾ ಹೀನ, ದೀನ, ದರಿದ್ರರಾಗಿ ನರಳುತ್ತಿರುತ್ತಾರೆ. ಯಾರು ನಿರ್ಭೀತರಾಗಿ ತಮ್ಮ ಕರ್ತವ್ಯಮಾರ್ಗದಲ್ಲಿ ಧೀರ ಗಂಭಿರರಾಗಿ ಮುಂದೆ ಸಾಗುತ್ತಾರೋ, ಅವರಿಗೇ ಜಗತ್ತಿನ ಎಲ್ಲ ಬಗೆಯ ಐಶ್ವರ್ಯ, ಸುಖ, ಸಂತೋಷಗಳು ಲಭಿಸುತ್ತವೆ. ಆದ್ದರಿಂದ ಸದಾ ನೆನಪಿನಲ್ಲಿಡಿ:—

**"ಸಾಹಸೇ ಶ್ರೀಃ ಪ್ರತಿವಸತಿ"**

ಧೈರ್ಯ—ಸಾಹಸಗಳಿರುವಲ್ಲೇ ಲಕ್ಷ್ಮಿಯು ನೆಲೆಸಿರುತ್ತಾಳೆ.

---

## ವೇದ ಪ್ರಚಾರದ ನಿಧಿಗೆ ದಾನ

ಶ್ರೀ ಐರೋಡಿ ರಾಧಾಕೃಷ್ಣ ಪೈ, ಬಡಗುಪೇಟೆ, ಉಡುಪಿ ಇವರು, ತಮ್ಮ ಹಿರಿಯ ಸಹೋದರ ಶ್ರೀ ಮನಮೋಹನ ಪೈಗಳು ದಿ. ೬—೮—೧೯೮೨ರಂದು ದಿವಂಗತರಾದ ಪ್ರಯುಕ್ತ ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರಿ ರೂ. ೧೨೫/-ನ್ನು ವೇದ ಪ್ರಚಾರ ನಿಧಿಗೆ ದಾನವಾಗಿ ಸಮರ್ಪಿಸಿದ್ದಾರೆ.

ಪರಮ ಕರುಣಾಮಯನಾದ ಪರಮಾತ್ಮನು ದಿವಂಗತರ ಆತ್ಮಕ್ಕೆ ಶಾಂತಿಯನ್ನು ಕರುಣಿಸಲಿ, ಹಾಗೂ ಅವರ ಪರಿವಾರ, ಬಂಧು-ಬಳಗದವರಲ್ಲಿ ವಿಯೋಗದ ದುಃಖವನ್ನು ಸಹಿಸುವ ಶಕ್ತಿಯನ್ನು ಕರುಣಿಸಲಿ. —**ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ.**

# ನಮ್ಮ ನಡೆ

ಭೂ ಸುಧಾರಣೆ ಕಾಯ್ದೆ ಪ್ರಕಾರ ರಾಜ್ಯದಲ್ಲಿ ಹೆಚ್ಚುವರಿ ಭೂಮಿಯನ್ನು ಗುರುತಿಸಿ ಹಂಚಲಾಗಿರುವ 63,873 ಎಕರೆ ಭೂಮಿಯಲ್ಲಿ 7717 ಹರಿಜನ-ಗಿರಿಜನ ಕುಟುಂಬಗಳಿಗೆ 34,273 ಎಕರೆ ಭೂಮಿ ದೊರಕಿದೆ. ಹೆಚ್ಚುವರಿ ಭೂಮಿಯ ಕನಿಷ್ಟ ಶೇಕಡಾ 50ರಷ್ಟನ್ನಾದರೂ ಹರಿಜನ-ಗಿರಿಜನರಿಗೆ ಹಂಚುವುದು ಸರ್ಕಾರದ ಉದ್ದೇಶ.

ನಿವೇಶನ ರಹಿತ ಕುಟುಂಬಗಳಿಗೆ ಹಂಚಲಾಗಿರುವ 9.81 ಲಕ್ಷ ನಿವೇಶನಗಳ ಪೈಕಿ ಶೇ. 44ರಷ್ಟು ಎಂದರೆ 3.97 ಲಕ್ಷ ನಿವೇಶನಗಳನ್ನು ಹರಿಜನ-ಗಿರಿಜನರಿಗೆ ನೀಡಲಾಗಿದೆ. ವಿತರಣೆ ಮಾಡಲಾಗಿರುವ 5.27 ಜನತಾ ಮನೆಗಳಲ್ಲಿ 1.38 ಲಕ್ಷ ಮನೆಗಳನ್ನು ಹರಿಜನರಿಗೆ ಕೊಡಲಾಗಿದೆ.

ಪೌರ ಕಾರ್ಮಿಕರ ಬದುಕಿನಲ್ಲಿ ಉತ್ಸಾಹ ಮತ್ತು ನೆಮ್ಮದಿ ಮೂಡುವಂತೆ ಉತ್ತಮ ಸೇವಾ ಸೌಲಭ್ಯಗಳ ವಿಸ್ತರಣೆ.

ಹರಿಜನ-ಗಿರಿಜನರ ಮಕ್ಕಳಿಗೆ ಶಿಕ್ಷಣ ಸೌಲಭ್ಯವನ್ನೊದಗಿಸಲು ಈ ವರ್ಷ ಇನ್ನೂ 2 ಸಾವಿರ ಗ್ರಾಮಗಳು ಮತ್ತು ಸಣ್ಣ ಪಟ್ಟಣಗಳಲ್ಲಿ ಜ್ಞಾನ ಮಂದಿರಗಳ ನಿರ್ಮಾಣ.

ಹರಿಜನ-ಗಿರಿಜನ ಅಭಿವೃದ್ಧಿ ನಿಗಮದ ಮೂಲಕ ಈ ವರ್ಷ ಇಪ್ಪತ್ತು ಸಾವಿರ ಜನರಿಗೆ ಸಾಲ ಮತ್ತು ಸಹಾಯ ಧನ ರೂಪದಲ್ಲಿ ನೆರವು.

ಮಾಜಿ ತೋಟಿ ತಳವಾರ ಮತ್ತು ನೀರುಗಂಟಿಗಳಿಗೆ ತಿಂಗಳಿಗೆ 75 ರೂ. ಗಳ ಮಾಸಿಕ ಭತ್ಯ.

ಇದಲ್ಲದೇ ಉದ್ಯೋಗ ಸ್ಥಾಪನೆಗೆ ವಿಶೇಷ ನೆರವು. ಅಂತರ್ಜಾತೀಯ ವಿವಾಹಗಳಿಗೆ ಧನ ಸಹಾಯ, ಅಂಬೇಡಕರ ಪ್ರತಿಮೆಯ ಸ್ಥಾಪನೆ. ಅಂಬೇಡಕರ ಜನ್ಮದಿನದಂದು ರಜಾ ಘೋಷಣೆ; ಹರಿಜನ ವಿದ್ಯಾಸಂಸ್ಥೆಗಳಿಗೆ ವಿಶೇಷ ಧನ ಸಹಾಯ, ವೈದ್ಯಕೀಯ ಕಾಲೇಜು ಸ್ಥಾಪನೆಗೆ ಅನುಮತಿ. ನಗರಸಭೆ ಮುಂತಾದ ಸ್ಥಳೀಯ ಸಂಸ್ಥೆಗಳಲ್ಲಿ 18 ಪ್ರತಿಶತ ಹಣದ ವೆಚ್ಚದ ಮೇಲೆ ನಿಗಾ ಇಡುವುದಕ್ಕಾಗಿ ವಿಶೇಷ ಸಮಿತಿಗಳ ರಚನೆ ಮುಂತಾದ ಕ್ರಮಗಳು ಹರಿಜನರ ಬಗ್ಗೆ ಸರ್ಕಾರಕ್ಕಿರುವ ಕಳಕಳಿಯ ದ್ಯೋತಕ.

ಪ್ರಕಟಣೆ:

**ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

# ಬೆಳಕಿನೆಡೆಗೆ

ಹರಿಜನ ಗಿರಿಜನ ಕಲ್ಯಾಣಕ್ಕಾಗಿ ಕಂಕಣಬದ್ಧವಾಗಿರುವ ಕರ್ನಾಟಕ ವಾರ್ಷಿಕ ಬಜೆಟ್ಟನಲ್ಲಿ ಹೆಚ್ಚು ಹಣವನ್ನು ಖರ್ಚು ಮಾಡುತ್ತಿರುವ ಕೆಲವೇ ರಾಜ್ಯಗಳಲ್ಲಿ ಮುಂಚೂಣಿಯಲ್ಲಿದೆ. ಗಿರಿಜನರಿಗೆ ಅನೇಕ ಯೋಜನೆಗಳನ್ನು ರೂಪಿಸಿ, ಜಾರಿಗೊಳಿಸಲಾಗುತ್ತಿದೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ವಯ ಆರನೆಯ ವಾರ್ಷಿಕ ಯೋಜನೆಯಲ್ಲಿ 5.76 ಲಕ್ಷ ಹರಿಜನ ಕುಟುಂಬಗಳನ್ನು ಬಡತನ ರೇಖೆಯಿಂದ ಮೇಲಕ್ಕೆತ್ತುವ ಗುರಿ ಹೊಂದಲಾಗಿದೆ. ಇಲ್ಲಿಯವರೆಗೆ 1.50 ಲಕ್ಷ ಕುಟುಂಬಗಳಿಗೆ ಈ ಸಹಾಯ ನೀಡುವ ಗುರಿ ದೊರಕಿದೆ. ಈ ವರ್ಷ 1.60 ಲಕ್ಷ ಕುಟುಂಬಗಳು ಈ ಸೌಲಭ್ಯ ಪಡೆಯಲಿದೆ.

ಈಗಾಗಲೇ ಇರುವ 410 ವಸತಿಗೃಹಗಳ ಜೊತೆಗೆ ಈ ವರ್ಷ ಇನ್ನೂ 130 ವಸತಿಗೃಹಗಳನ್ನು ತೆರೆಯಲಾಗಿದೆ. ಇದಲ್ಲದೇ ಹಿಂದುಳಿದ ವರ್ಗಗಳಿಗಾಗಿರುವ ವಸತಿಗೃಹಗಳಲ್ಲಿಯೂ ಶೇ. 25ರಷ್ಟು ಸ್ಥಾನಗಳನ್ನು ಹರಿಜನರಿಗೆ ನೀಡಲಾಗುತ್ತಿದೆ. ಹೀಗಾಗಿ ರಾಷ್ಟ್ರದಲ್ಲಿ ಒಟ್ಟು 7000 ಹರಿಜನ–ಗಿರಿಜನ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ವಸತಿ ಸೌಲಭ್ಯ ಉಂಟು. ಹರಿಜನ–ಗಿರಿಜನರಿಗಾಗಿ ನಾಲ್ಕು ಸೈನಿಕ ಶಾಲೆ ಮಾದರಿಯ ವಸತಿ ಶಾಲೆಗಳನ್ನು ಸ್ಥಾಪಿಸಲಾಗುವುದು.

ಹರಿಜನ–ಗಿರಿಜನರು ಸರ್ಕಾರಿ ಉದ್ಯೋಗಗಳಲ್ಲಿ ನಿಗದಿತ ಶೇಕಡಾ 18 ರಷ್ಟು ಸ್ಥಾನಗಳನ್ನು ಪಡೆಯುವುದನ್ನು ಖಚಿತಪಡಿಸಲಾಗುತ್ತಿದೆಯಲ್ಲದೆ ಬಡ್ತಿಯಲ್ಲಿಯೂ ಕೂಡಾ ಸ್ಥಾನಗಳನ್ನು ಮೀಸಲಿಡಲಾಗಿದೆ. ಇದನ್ನು ಖಚಿತ ಪಡಿಸಿಕೊಳ್ಳಲು ಎಲ್ಲ ನೇಮಕಾತಿ ಸಮಿತಿಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರು ಸದಸ್ಯರಾಗಿದ್ದಾರಲ್ಲದೆ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಸಮಿತಿಯನ್ನು ಕೂಡ ರಚಿಸಲಾಗಿದೆ.

ಹರಿಜನರ ಮೇಲಿನ ದೌರ್ಜನ್ಯಗಳನ್ನು ಕಂಡುಹಿಡಿದು ಅವರಿಗೆ ನ್ಯಾಯ ದೊರಕಿಸಿಕೊಡಲು ವಿಶೇಷ ಪೋಲೀಸ್ ಘಟಕಗಳನ್ನು ರಚಿಸಲಾಗಿದೆ. ಕಳೆದ ಒಂದೂವರೆ ವರ್ಷದ ಅವಧಿಯಲ್ಲಿ 16050 ಪ್ರಕರಣಗಳನ್ನು ಪತ್ತೆಹಚ್ಚಿ ಕ್ರಮ ಕೈಗೊಳ್ಳಲಾಗಿದೆ.

**ಪ್ರಕಟಣೆ: ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

# ೧೮೮೩ರ ದೀಪಾವಳಿಯನ್ನು ಸ್ಮರಿಸೋಣ ಭಾರತದಾದ್ಯಂತ ಜ್ಞಾನದ ಜ್ಯೋತಿಯನ್ನು ಬೆಳಗಿಸೋಣ!

● ಸುಕುಮಾರ ಶಾಸ್ತ್ರೀ

ದಯೆ ಮತ್ತು ಆನಂದ ಇವೆರಡರ ಮೂರ್ತಸ್ವರೂಪರಾಗಿದ್ದರು ಮಹರ್ಷಿ ದಯಾನಂದ ಸರಸ್ವತಿಯವರು. ಹಾಲಾಹಲವನ್ನು ಹಾಲಂತೆ ಕುಡಿದು ಸಮಸ್ತ ಮಾನವಜಾತಿಗೆ ಅಮೃತ ಸುಧೆಯನ್ನುಣಿಸಿದರು. ಹಾವನ್ನು ಹಾರವೆಂದೂ, ಕಲ್ಲಿನ ಸುರಿಮಳೆಯನ್ನು ಪುಷ್ಪವೃಷ್ಟಿಯೆಂದು ಭಾವಿಸಿ ನಗು ನಗುತ್ತಾ ವೇದಮಾತೆಯ ದಿವ್ಯಸ್ವರೂಪವನ್ನು ನಮಗೆಲ್ಲರಿಗೂ ತೋರಿಸಿಕೊಟ್ಟರು ಆ ಮಹಾಮಾನವ. 'ಹೆತ್ತವರಿಗೆ ಹೆಗ್ಗಣ ಮುದ್ದು'—ಎಂದಿರುವಾಗ ಆ ಮಹಾಮಾತೆಗೆ ಶೂದ್ರ-ಬ್ರಾಹ್ಮಣ-ಎಂಬ ಭೇದವಿರಲು ಸಾಧ್ಯವೇ? ಯಾವ ರೀತಿ ತಾಯಿಯಾದವಳು ತನ್ನ ಶಿಶುವಿಗೆ ಹಾಲನ್ನುಣಿಸುತ್ತಾಳೋ ಅದೇರೀತಿ ಆ ವೇದಮಾತೆ ಮಾನವಮಾತ್ರರಿಗೆ ಅಮೃತಸುಧೆಯನ್ನು ಜ್ಞಾನಸುಧೆಯನ್ನುಣಿಸಿ ಅವರ ಅಭ್ಯುದಯ ಮತ್ತು ನಿಶ್ರೇಯಸ್ಸಿಗೆ ಕಾರಣೀಭೂತಳಾಗಿದ್ದಾಳೆ. ಸಮಸ್ತ ಮಾನವರೂ ಅವಳ ಮಕ್ಕಳೇ ಆದ ಕಾರಣ ಅವಳಿಗೆ ಯಾವರೀತಿಯ ಭೇದಭಾವವಿಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಯಪಡಿಸಿದವರೇ ದಯಾನಂದರು. ಬಾಲ್ಯ ಕಾಲದಲ್ಲಿಯೇ ಶಿವಲಿಂಗದ ಪೂಜೆಯನ್ನು ಮಾಡುವಾಗ ಶಿವಲಿಂಗವು ವಾಸ್ತವಿಕ ಶಿವನಲ್ಲ ಎಂದು ಮನಗಂಡು ವಾಸ್ತವಿಕ ಶಿವನ ಸಾಕ್ಷಾತ್ಕಾರ ಮಾಡಿ **"ಆತ್ಮನಾ ಆತ್ಮಾನಂ ಅಭಿ ಸಂವಿವೇಶ"** (ಯಜುರ್ವೇದ) ಜೀವಾತ್ಮನ ಮೂಲಕವೇ ಪರಮಾತ್ಮನ ಸಾಮೀಪ್ಯವನ್ನು ಹೊಂದಲು ಮಾತ್ರ ಸಾಧ್ಯ. **'ನಾನ್ಯ ಪಂಥ ವಿದ್ಯತೇಽಯನಾಯ'** ಇದರ ಹೊರತು ಯಾವುದೇರೀತಿಯ ಅನ್ಯ ಮಾರ್ಗವಿಲ್ಲ ಎಂದು ಜಗತ್ತಿಗೆ ಸಾರಿದರು.

ಕೆಲವರಿಗೆ ಅವರು ಮಾಡಿದ ಖಂಡನೆಯು ಕುಠಾರಾಘಾತದಂತೆ ಕಂಡಿರಬಹುದು. ಆದರೆ ಖಂಡನೆಯಾಗದೇ ಮಂಡನೆಯಾಗಲು ಎಷ್ಟುಮಾತ್ರಕ್ಕೂ ಸಾಧ್ಯವಿಲ್ಲ, ಎಂಬ ವಿಷಯ ಎಲ್ಲರಿಗೂ ತಿಳಿದಿದೆ. ನಾವು ವಸ್ತ್ರವನ್ನು ಕೊಂಡು ದರ್ಜಿಯ ಬಳಿ ಒಯ್ದು ಇದನ್ನು ಕತ್ತರಿಸದೇ ಶರ್ಟನ್ನೋ ಪೇಂಟನ್ನೋ ಅಥವಾ ರವಿಕೆಯನ್ನೋ ಹೊಲಿದುಕೊಡು ಎಂದು ಹೇಳಿದರೆ ಅವನು ನಮ್ಮ ಮೂರ್ಖತೆಗೆ ನಕ್ಕು ನಮ್ಮ ಬಟ್ಟೆಯನ್ನು ಹಿಂದಿರುಗಿಸುವುದಿಲ್ಲವೇ? ಓರ್ವ ವೈದ್ಯನು ನಿರ್ದಾಕ್ಷಿಣವಾಗಿ ರೋಗಿಗಳ ಶರೀರವನ್ನು ಕೊಯ್ಯುತ್ತಾನೆ. ಅದನ್ನು ನಾವು ಶಸ್ತ್ರಚಿಕಿತ್ಸೆ ಎನ್ನುತ್ತೇವೆ. ಒಬ್ಬ ಕಟುಕನು ಮಾಂಸಕ್ಕೋಸ್ಕರ ಪ್ರಾಣಿಗಳನ್ನು ಕೊಯ್ಯುತ್ತಾನೆ. ಆದರೆ ಅದು ಚಿಕಿತ್ಸೆಯಾಗಿರದೇ ವಧೆಯೆನಿಸಲ್ಪಡುತ್ತದೆ. ವೈದ್ಯರು ಶರೀರವನ್ನು ಕೊಯ್ಯದಿದ್ದರೆ ರೋಗಿಯ ರೋಗ ದೂರವಾಗಲು ಸಾಧ್ಯವಿಲ್ಲ. ಗ್ರೇಂಗ್ರೀನ ಆದವರ—ಕಾಲನ್ನೇ ಕಡಿದುಹಾಕುತ್ತಾರೆ. ಹಾಗೆ ಮಾಡದಿದ್ದರೆ ಸಂಪೂರ್ಣ ಶರೀರವೇ ಕೊಳೆತು ಹೋಗಿ ರೋಗಿ ಸಾಯುತ್ತಾನೆ. ಕಾಲನ್ನು ಕಡಿಯುವುದರಲ್ಲಿ ರೋಗಿಯ ಹಿತವಿದೆ ವಿನಹ ಅಹಿತವಲ್ಲ ಸ್ವಾಮಿ ದಯಾನಂದರು ಮಾಡಿದುದೂ ಅದೇ. ಅವರು ಓರ್ವ ಕುಶಲ ವೈದ್ಯನಂತ ಸಾಮಾಜಿಕ ರೋಗದ ಶಸ್ತ್ರ ಚಿಕಿತ್ಸೆ ಮಾಡಿದರು ವಿನಹ ಕಟುಕನಂತೆ ಕಡಿಯಲಿಲ್ಲ.

ಸಂಪೂರ್ಣ ಮಾನವಜಾತಿ ವ್ಯಾಧಿಗ್ರಸ್ತವಾಗಿತ್ತು. ಪಾಷಂಡಿಗಳ ಕೈಯಲ್ಲಿ ಸಿಕ್ಕಿ ನರಳು ತ್ತಿತ್ತು. ಹಗಲು ದರೋಡೆಕೋರರು ನಿರಾತಂಕವಾಗಿ ದರೋಡೆಯನ್ನು ಮಾಡುತ್ತಿದ್ದರು. ನಾರಿಯರು ಅಜ್ಞಾನಿಗಳಾಗಿದ್ದು ಬಾಲ್ಯಕಾಲದಲ್ಲಿಯೇ ವಿವಾಹಿತರಾಗಿ ಯೌವನದಲ್ಲಿ ವಿಧವೆ ಯರಾಗಿ ಆಕ್ರಂದಿಸುತ್ತಿದ್ದರು. ಇವರೆಲ್ಲರನ್ನೂ ಉದ್ಧರಿಸಿದವರು ದಯಾನಂದರು. ಶೂದ್ರರೂ ನಾರಿಯರೂ ವಿದ್ಯಾವಂತರಾಗಬೇಕು. ಸಮಸ್ತ ಮಾನವರೂ ಮಾತೆ ಸರಸ್ವ ತಿಯ ಮಕ್ಕಳು ಎಂದು ಸಾರಿದರು. ಕಲ್ಲಿನ ವಿಗ್ರಹಗಳನ್ನು ಆರಾಧಿಸುವ ಬದಲು ಜೀವಿತ ರಾಗಿರುವ ಮೂರ್ತಿ ತಂದೆ, ತಾಯಿ, ಗುರುಹಿರಿಯರು, ಅತಿಥಿಗಳು, ವಿದ್ವಾಂಸರು ಇವರೇ ದೇವತೆಗಳು ಇವರ ಸೇವೆ ಮಾಡಿ ಎಂದು ಹೇಳಿದರು. ಕೇನೋಪನಿಷತ್ತಿನಲ್ಲಿ ಹೇಳಿದೆ—

**ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಂಷಿ ಪಶ್ಯತಿ ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದ ಮುಪಾಸತೇ ।**

ಬಾಹ್ಯ ಚಕ್ಷುಗಳಿಂದ ಯಾರನ್ನು ನೋಡಲು ಸಾಧ್ಯವಿಲ್ಲವೋ ಮತ್ತು ಯಾರ ಶಕ್ತಿಯಿಂದ ಕಣ್ಣುಗಳು ನೋಡುತ್ತವೆಯೋ ಅವನನ್ನೇ ಬ್ರಹ್ಮ ಸರ್ವಜ್ಯೇಷ್ಠನಾದ ಪರ ಮಾತ್ಮ ಎಂದು ತಿಳಿ. ಬಾಹ್ಯ ಚಕ್ಷುಗಳಿಗೆ ಕಾಣಸಿಗುವ ಯಾವ ವಸ್ತುವೂ ಪರಮಾತ್ಮ ನಾಗಲು ಸಾಧ್ಯವಿಲ್ಲ. ಈ ರೀತಿ ಪರಮಾತ್ಮನ ಉಪಾಸನೆಯ ವಾಸ್ತವಿಕ ವಿಧಾನವನ್ನು ನಮಗೆ ತಿಳಿಯಪಡಿಸಿದರು. ವೇದಗಳಲ್ಲಿ ಸಂಪೂರ್ಣ ವಿದ್ಯೆ ಜ್ಞಾನ ವಿಜ್ಞಾನಗಳು ಅಡಕ ವಾಗಿವೆ, ತನ್ಮೂಲಕವೇ ಮಾನವನು ಸಮಸ್ತ ಲೌಕಿಕ ಹಾಗೂ ಪಾರಲೌಕಿಕ ಸಂಪತ್ತನ್ನು ಪಡೆಯಲು ಸಾಧ್ಯ ಎಂದು ಘಂಟಾಘೋಷವಾಗಿ ಹೇಳಿದರು. ಇದು ದಯಾನಂದರ ದಯೆಯ ಮೂರ್ತಸ್ವರೂಪ.

ಬನ್ನಿರಿ ದಯಾನಂದರ ಆನಂದದ ಮೂರ್ತ ಸ್ವರೂಪವನ್ನು ನೋಡೋಣ. ದೀಪಾ ವಳಿಯ ಪರ್ವದಿನ ೧೮೮೩ ಆಶ್ವೀಜ ಅಮಾವಾಸ್ಯೆಯಂದು ದಯಾನಂದರು ಮಂಚದ ಮೇಲೆ ಪವಡಿಸಿದ್ದರು. ಉದಯಪುರ ಮಹಾರಾಣಾನ ವೇಶ್ಯೆಯು ದಯಾನಂದರ ಅಡುಗೆಯನ್ನು ಮಾಡುವ ಜಗನ್ನಾಥನ ಮೂಲಕ ಹಾಲಿನಲ್ಲಿ ಹಾಲಾಹಲವನ್ನು ಮತ್ತು ಗಾಜಿನ ಚೂರು ಗಳನ್ನು ಬೆರಸಿ ಕುಡಿಸಿದ್ದಳು. ಹಾಲಾಹಲವನ್ನು ಯೋಗಬಲದ ಮೂಲಕ ವಿಸರ್ಜಿಸಿದ್ದರು. ಇದು ಅವರಿಗೆ ಹೊಸತಲ್ಲ. ಇದರ ಮೊದಲು ಹದಿನಾರು ಸಲ ಹಲವರು ಹಲವು ರೀತಿಯಲ್ಲಿ ವಿಷವನ್ನುಣ್ಣಿಸಿದ್ದರು. ಹದಿನೇಳನೇ ಬಾರಿ ಹಾಲಾಹಲದೊಂದಿಗೆ ಗಾಜಿನ ಚೂರುಗಳಿದ್ದವು. ಆದರಿಂದ ಅವರ ಕರುಳು ಕತ್ತರಿಸಿಹೋಯಿತು. ಸಂಪೂರ್ಣ ದೇಹವು ವಿಷಮಯವಾಗಿದ್ದು ಮೈಮೇಲೆಲ್ಲಾ ಹುಣ್ಣುಗಳೆದ್ದು ಅಸಹನೀಯ ಯಾತನೆಯಾಗುತ್ತಿತ್ತು. ತನಗೆ ವಿಷವನ್ನು ಣಿಸಿದ್ದ ಜಗನ್ನಾಥನಿಗೆ ಧನವನ್ನು ಕೊಟ್ಟು ನೇಪಾಳಕ್ಕೆ ಕಳುಹಿಸಿದ್ದರು. ಸಾಯಂಕಾಲ ವಾಯಿತು, ಸ್ನಾನವನ್ನು ಮಾಡಿದರು, ಶುಭ್ರವಸ್ತ್ರಧಾರಿಗಳಾಗಿ ಮಂಚದ ಮೇಲೆ ಕುಳಿತು ಕೊಂಡರು. ಸನಿಹದಲ್ಲಿಯೇ ಸಾಸ್ತಿಕನಾದ ಗುರುದತ್ತನಿದ್ದ. ದಯಾನಂದರು ಪದ್ಮಾಸನ ದಲ್ಲಿ ಕುಳಿತುಕೊಂಡು ಗುರುದತ್ತನನ್ನು ಕರೆದು "ಗುರುದತ್ತ, ದೀಪವನ್ನು ಹೊತ್ತಿಸು. ಕಿಟಕಿ ಬಾಗಿಲುಗಳನ್ನು ತೆರೆ, ನನ್ನ ಹಿಂದೆ ನಿಲ್ಲು" ಎಂದರು. ಗುರುದತ್ತನು ಇಷ್ಟೆಲ್ಲಾ ಮಾಡಿದ ನಂತರ ಬಹಳ ಶಾಂತಚಿತ್ತರಾಗಿ ಗಾಯತ್ರಿ ಮಂತ್ರದ ಉಚ್ಚಾರಣೆ ಮಾಡಿದರು. ಇನ್ನು ಕೆಲವು ವೇದಮಂತ್ರಗಳನ್ನುಚ್ಚರಿಸಿ ನಗುನಗುತ್ತಾ ಎರಡೂ ಕೈಗಳನ್ನೆತ್ತಿ "ಪ್ರಭು ನಿನ್ನಿಷ್ಟ

ಪೂರ್ಣವಾಗಲಿ" ಎಂದರು. ಶಿಶುವು ತನ್ನ ತಾಯಿಯ ಮಡಿಲಲ್ಲಿ ಸೇರಿದಂತೆ ದಯಾನಂದರು ಪರಮಾತ್ಮನ ಮಡಿಲಲ್ಲಿ ಸೇರಿದರು. ಜ್ಯೋತಿಯು ಮಹಾಜ್ಯೋತಿಯಲ್ಲಿ ಲೀನವಾಯಿತು. ಒಂದು ಜ್ಯೋತಿ ನಂದಿಹೋಯಿತು. ಅದರೊಂದಿಗೆ ಅಸಂಖ್ಯಾತ ಜ್ಯೋತಿಗಳು ಬೆಳಗಿದವು. ಘೋರ ನಾಸ್ತಿಕನಾಗಿದ್ದ ಗುರುದತ್ತ. ಪೂರ್ಣ ಆಸ್ತಿಕರಾದ ದಯಾನಂದರು ಜೀವನ್ಮುಕ್ತರಾಗಿದ್ದರು. ಅಂತಹ ಘೋರ ಯಾತನೆಯನ್ನನುಭವಿಸುತ್ತಿದ್ದರೂ ಕಿಂಚಿತ್ತಾದರೂ ತೋರಗೊಡದೇ ನಗು ನಗುತ್ತಾ ಪ್ರಭು ನಿನ್ನಿಚ್ಛೆ ಪೂರ್ಣವಾಗಲಿ ಎಂದು ಬಾಹುಗಳನ್ನು ಪಸರಿಸಿ ತಾಯಿಯ ಮಡಿಲಲ್ಲಿ ಶಿಶುವು ಸೇರುವಂತೆ ಪರಮಾತ್ಮನ ಮಡಿಲಲ್ಲಿ ಸೇರಿದರು. ಇದು ಅವರ ಆನಂದದ ಮೂರ್ತಸ್ವರೂಪ.

ಇಂದಿಗೆ 99 ವರ್ಷಗಳ ಮೊದಲು ದೀಪಾವಳಿಯಂದು ಗುರುದತ್ತನಿಗೆ ಕೊಟ್ಟ ದಿವ್ಯ ಸಂದೇಶದ ಕಡೆಗೆ ಸ್ವಲ್ಪ ಗಮನ ಕೊಡೋಣ. 'ಗುರುದತ್ತ! ದೀಪವನ್ನು ಬೆಳಗಿಸು. ಇದು ಕೇವಲ ಗುರುದತ್ತನಿಗೆ ಮಾತ್ರ ಹೇಳಿದ್ದಲ್ಲ ನಮಗೆಲ್ಲರಿಗೂ ಕೊಟ್ಟಂತಹ ದಿವ್ಯ ಸಂದೇಶ. ಮಾನವರೇ ನೀವು ಅಜ್ಞಾನಾಂಧಕಾರದಲ್ಲಿರಬೇಡಿ. ೮೪ ಲಕ್ಷ ಯೋನಿಗಳಲ್ಲಿ ಮಾನವ ಯೋನಿಯು ಸರ್ವಶ್ರೇಷ್ಠವಾದುದು. ಈ ಜನ್ಮದಲ್ಲಿಯೇ ದಿವ್ಯವಾದ ವೇದಜ್ಞಾನವನ್ನು ಪಡೆದು ಪರಮಾತ್ಮನ ಸ್ವರೂಪವನ್ನು ತಿಳಿಯಿರಿ. ಜ್ಞಾನಜ್ಯೋತಿಯನ್ನು ಬೆಳಗಿಸಿರಿ. **ಋತೇ ಜ್ಞಾನಾನ್ನ ಮುಕ್ತಿಃ.** ಜ್ಞಾನ ಸಿಗದೆ ಹೊರತು ಮೋಕ್ಷವನ್ನು ಹೊಂದಲು ಎಷ್ಟುಮಾತ್ರಕ್ಕೂ ಸಾಧ್ಯವಿಲ್ಲ.

'ಕಿಟಕಿ ಬಾಗಿಲನ್ನು ತೆರೆ', ಇದರರ್ಥ ಸ್ವತಃ ಜ್ಞಾನವಂತರಾಗಿ ಇತರರನ್ನೂ ಜ್ಞಾನಿಗಳನ್ನಾಗಿ ಮಾಡಿರಿ. ನಿಮ್ಮ ಹೃದಯವು ವಿಶಾಲವಾಗಿರಲಿ. ಯಾವ ರೀತಿ ಗಾಳಿ ಬೆಳಕು ನೀರು ಮೊದಲಾದುವುಗಳನ್ನು ಪರಮಾತ್ಮನು ಮಾನವ ಮಾತ್ರರಿಗೆ ಕೊಟ್ಟಿದ್ದಾನೋ ಅದೇ ರೀತಿ ವೇದವಾಣಿಯನ್ನೂ ಮಾನವ ಮಾತ್ರರಿಗೆ ಭಗವಂತನು ಅನುಗ್ರಹಿಸಿದ್ದಾನೆ. ಯಾರಲ್ಲಿಯೂ ಯಾವುದೇ ರೀತಿಯ ಭೇದಭಾವ ಕೂಡದು.

'ನನ್ನ ಹಿಂದೆ ನಿಲ್ಲು'. ದಯಾನಂದರು ಯಾವ ಜೀವಪರ್ಯಂತ ಮಾನವ ಮಾತ್ರರ ಕಲ್ಯಾಣಕ್ಕೋಸ್ಕರ ತಮ್ಮ ಜೀವನವನ್ನೇ ತೇಯ್ದರು. ತನ್ನ ನಂತರ ಈ ಕಾರ್ಯವು ಸದಾಕಾಲ ಅನೂಚಾನವಾಗಿ ನಡೆಯುತ್ತಿರಬೇಕು ಎಂಬ ಆಶೆ. ಅದಕ್ಕೋಸ್ಕರವಾಗಿಯೇ ಆರ್ಯ ಸಮಾಜದ ಸ್ಥಾಪನೆಯನ್ನು ಮಾಡಿದರು. **'ಕೃಣ್ವಂತೋ ವಿಶ್ವಮಾರ್ಯಂ'** ಸಂಪೂರ್ಣ ವಿಶ್ವದ ಜನರನ್ನೇ ಆರ್ಯರನ್ನಾಗಿ ಮಾಡಿರಿ ಎಂದರು. ಆರ್ಯ ಎಂದರೆ ಪರಮಾತ್ಮನ ಪುತ್ರ ಎಂದರ್ಥ. ನಾವೆಲ್ಲರೂ ಪರಮಾತ್ಮನ ಮಕ್ಕಳೇ. **"ಆರ್ಯಾ ಜ್ಯೋತಿರಗ್ರಾಃ"** ಯಾರು ಜ್ಯೋತಿಯನ್ನು ಎದುರಿಟ್ಟುಕೊಂಡು ನಡೆಯುತ್ತಾರೋ ಅವರೇ ಆರ್ಯರು. ಅಜ್ಞಾನಾಂಧಕಾರದಲ್ಲಿ ಎಡವರಿಸಿ ಮುಗ್ಗರಿಸಿ ಬೀಳುವವರು ಆರ್ಯರಲ್ಲ. ಪರಮಾತ್ಮನೊಡನೆ ನಾವು **"ತಮಸೋಮಾ ಜೋತಿರ್ಗಮಯ"** ಎಂದು ಪ್ರಾರ್ಥಿಸುತ್ತೇವೆ. ಹೇ ಪ್ರಭು ನಮ್ಮನ್ನು ಅಜ್ಞಾನಾಂಧಕಾರದಿಂದ ಜ್ಞಾನದ ಕಡೆಗೆ ಕೊಂಡೊಯ್ಯು. ಜ್ಞಾನಿಗಳಾದ ಮೇಲೆಯೇ ಮೃತ್ಯುವಿನಿಂದ ಅಮರತ್ವದ ಕಡೆಗೆ ಹೋಗಲು ಸಾಧ್ಯ. ಆದುದರಿಂದ ಬಂಧುಗಳೇ, ದಯಾನಂದರ ದಿವ್ಯ ಸಂದೇಶವನ್ನು ಜೀವನದಲ್ಲಿ ಅಳವಡಿಸಿಕೊಳ್ಳೋಣ. ದೀಪಾವಳಿಯ ದೀಪದೊಂದಿಗೆ ಆತ್ಮವನ್ನೂ ಬೆಳಗಿಸೋಣ.

---

ಒಂದು ನೀತಿ ಕಥೆ

# ಧರ್ಮೋ ರಕ್ಷತಿ ರಕ್ಷಿತಃ

● ಎಸ್. ಕೆ. ಶ್ರೀಪತಿ ಆಚಾರ್ಯ

ಅದೊಂದು ನಗರ, ಅದನ್ನು ಧರ್ಮಿಷ್ಠನಾದೊಬ್ಬ ರಾಜನಾಳುತ್ತಿದ್ದ. ಅವನ ದಾನ ಧರ್ಮಗಳ ಪ್ರವಾಹ ಎಂದೂ ಬತ್ತಿದ್ದಿಲ್ಲ. ಒಂದು ದಿನ ಒಬ್ಬ ಸಾಧುವು ಅವನಲ್ಲಿಗೆ ಬಂದನು. ಅವನು-"ರಾಜ! ನನಗೇನಾದರೂ ದಾನಕೊಡು'' ಎಂದನು. "ಹೇಳಿರಿ, ನಾನೇನು ಕೊಡಲಿ" ಎಂದು ರಾಜನೆಂದಾಗ ಸಾಧುವು "ಹನ್ನೆರಡು ವರ್ಷಗಳ ವರೆಗೆ ನಿನ್ನ ರಾಜಕಾರ್ಯಗಳನ್ನು ನನಗೆ ಬಿಟ್ಟುಕೊಡು. ಇಲ್ಲವೇ ನಿನ್ನ ಧರ್ಮವನ್ನು ದಾನಕೊಡು''. ರಾಜನು ವಿಚಾರ ಪರವಶನಾಗಿ ಕೊಂಚಕಾಲದ ನಂತರ "ಮಹಾರಾಜ! ನಾನು ನನ್ನ ರಾಜಕಾರ್ಯಗಳನ್ನು ನೀನೆಂದಂತೆ ನಿನಗೆ ಬಿಟ್ಟುಕೊಟ್ಟಿರುವೆನು. ಅದನ್ನು ಚೆನ್ನಾಗಿ ಮುನ್ನಡೆಯಿಸಿಕೊಂಡು ಹೋಗಿರಿ" ಎಂದು ಹೇಳಿ ಅಲ್ಲಿಂದ ತಾನು ಏಕಾಕಿಯಾಗಿ ಹೊರಟುಹೋದನು.

ದಾರಿ ಸಾಗುತ್ತಾ ಅವನೊಂದು ತೋಟವನ್ನು ಪ್ರವೇಶಿಸಿದನು. ಅದೊಂದು ರಮಣೀಯವಾದ ಸ್ಥಾನ. ಅಲ್ಲಿ ಬಾವಿ ಮತ್ತು ಅರವಟ್ಟಿಗೆಯಿತ್ತು. ರಾಜನು ವಿಶ್ರಾಂತಿ ಪಡೆಯಲು ಅಲ್ಲಿ ತಳವೂರಿದನು. ಅತ್ತಿತ್ತ ದೃಷ್ಟಿ ಹಾಯಿಸಿದಾಗ ಜೀನು ಹಾಕಿದ ಕುದುರೆ ಯೊಂದನ್ನು ಅವನು ಕಂಡನು. ಬಳಿಯಲ್ಲಿ ಒಬ್ಬ ಸುಂದರ ಯುವತಿಯು ಅಳುತ್ತಾ ಕುಳಿತಿ ದ್ದಳು. ರಾಜನಿಗೆ ಅವಳನ್ನು ಕಂಡು ಕರುಣೆ ಹುಟ್ಟಿತು. ರಾಜನು ಅವಳ ಬಳಿಗೆ ಬಂದು ಚಿಂತೆಯ ಕಾರಣವೇನೆಂದು ಕೇಳಿದನು. ಆಗ ಯುವತಿಯೆಂದಳು—"ಮಹಾರಾಜ, ನಾನೊಬ್ಬ ರಾಜಕುಮಾರಿಯಿರುವೆನು. ನನ್ನ ತಂದೆ ಮತ್ತು ಸೋದರರನ್ನು ಶತ್ರುಗಳು ಕೊಂದಿಕ್ಕಿದರು. ನಾನು ಹೇಗೋ ಜೀವವುಳಿಸಿಕೊಂಡು ತಪ್ಪಿಸಿಕೊಂಡು ಇಲ್ಲಿಗೆ ಓಡಿಬಂದಿರುವೆನು. ನನ್ನ ಭಾಗ್ಯವಶದಿಂದ ದೈವವೇ ನಿಮ್ಮನ್ನು ನನ್ನ ಆಶ್ರಯದಾತನನ್ನಾಗಿ ಇಲ್ಲಿಗೆ ಕರೆತಂದಿರುತ್ತದೆ. ನಾನು ನಿಮ್ಮ ಮರೆಹೊಕ್ಕಿರುವೆನು." ರಾಜನು "ಹಾಗಿದ್ದರೆ ಸರಿ, ಈ ಕುದುರೆಯನ್ನೇರಿ ಮುಂದೆ ನಡೆ" ಎಂದನು. ಯುವತಿಯೆಂದಳು-"ಇಲ್ಲ, ಮಹಾರಾಜ, ನಿನ್ನ ಮುಂದೆ ನಾನು ಕುದುರೆಯೇರಿ ನಡೆಯುವುದು ಉಚಿತವಲ್ಲ." ಇಬ್ಬರು ನಡೆದುಬರುತ್ತಾ ಇನ್ನೊಬ್ಬ ರಾಜನ ಪಟ್ಟಣವನ್ನು ಸೇರಿದರು. ಯುವತಿಯು ರಾಜನನ್ನು ಕುರಿತು "ನೀನು ಪಟ್ಟಣದಲ್ಲಿ ಹೋಗಿ ಸುಂದರವಾದ ಭವನವನ್ನು ನಮ್ಮ ವಾಸಕ್ಕಾಗಿ ಬಾಡಿಗೆಗಾಗಿ ಪಡೆ, ಅಷ್ಟರತನಕ ನಾನಿಲ್ಲೇ ಇರುವೆನು." ರಾಜನೆಂದನು—"ಅರೆ, ನನ್ನಲ್ಲಿ ಅರ್ಧ ನಾಣ್ಯವೂ ಇಲ್ಲ, ನಾನು ಹೇಗೆ ವಾಸ ಸ್ಥಾನವನ್ನು ಬಾಡಿಗೆ ಹಿಡಿಯಲಿ" ಆಗ ತರುಣಿಯು "ಮಹಾರಾಜ! ಹಣಕಾಸಿನ ಆವಶ್ಯಕತೆ ಇದ್ದಲ್ಲಿ ನನ್ನಿಂದ ಪಡೆದುಕೊಂಡು ಹೋಗು" ಎನ್ನುತ್ತಾ ಹತ್ತು ಬಂಗಾರದ ನಾಣ್ಯಗಳನ್ನು ರಾಜನ ಕೈಯಲ್ಲಿ ಇಟ್ಟಳು. ರಾಜನು ಪಟ್ಟಣದಲ್ಲಿ ತಿರುಗಾಡಿ ಸುಂದರವಾದ ಕಟ್ಟಡ ವನ್ನು ಬಾಡಿಗೆಗೆ ಹಿಡಿದು ಬಂದನು. ಆ ಯುವತಿಯೂ ರಾಜನೂ ಅಲ್ಲಿಗೆ ಹೋಗಿ ವಾಸಿಸ ತೊಡಗಿದರು. ರಾಜನು ನಗರದಿಂದ ತಮ್ಮಿಬ್ಬರಿಗೆ ಮತ್ತು ಕುದುರೆಗೆ ಭೋಜನ ಸಾಮಗ್ರಿ ಗಳನ್ನು ತಂದನು. ಆ ಯುವತಿಯು ತಾನು ಭೋಜನವನ್ನು ಸಿದ್ಧಪಡಿಸಿ ರಾಜನನ್ನು

ಉಣ್ಣುವಂತೆ ತಿಳಿಸಿದಳು. ರಾಜನೆಂದನು—ನೀವು ಮೊದಲಾಗಿ ಭೋಜನ ಮಾಡಿರಿ" ಆವಳೆಂದಳು ""ಅದಾಗದು ಮಹಾರಾಜ. ಮೊದಲು ನೀವು ಭೋಜನ ಸ್ವೀಕರಿಸಿರಿ. ಮತ್ತೆ ನಾನು ಉಣ್ಣುವೆನು." ರಾಜನಂತೆಯೇ ಊಟ ಮಾಡಿದನು. ಆವಳು ಮತ್ತೆ ಉಂಡಳು.

ಮರುದಿನ ಯುವತಿಯು ರಾಜನನ್ನು ಕುರಿತು ಹೇಳಿದಳು—"ರಾಜ, ನೀವು ಬಹಳ ವಾಗಿ ಕಷ್ಟಪಡುತ್ತೀರಿ, ಒಬ್ಬ ನೌಕರನನ್ನು ಗೊತ್ತುಮಾಡಿ". ರಾಜನೆಂದನು "ಅರೆ, ನಾನು ಅರೆ ನಾಣ್ಯ ಪಡೆದವನಲ್ಲ. ನೀನು ರಾಜ–ಮಹಾರಾಜನಂತೆ ಮಾತಾಡುವೆಯಲ್ಲಾ!" ಅದಕ್ಕೆ ಯುವತಿಯು "ಮಹಾರಾಜ, ನೀವು ಚಿಂತಾತುರರಾಗಬೇಡಿ. ನಾನು ಸ್ತ್ರೀಯಾಗದಿದ್ದಲ್ಲಿ ಈ ಕೆಲಸಗಳನ್ನು ಮಾಡಲು ಹಿಂಜರಿಯುತ್ತಿರಲಿಲ್ಲ. ನಿಮ್ಮೊಡನೆ ಈ ರೀತಿ ಹೇಳುತ್ತಲೂ ಇರ ಲಿಲ್ಲ. ಹಣ–ಕಾಸಿನ ಅಗತ್ಯವಿದ್ದಾಗ ಆವಶ್ಯವಾಗಿ ನನ್ನೊಡನೆ ಹೇಳಿ, ನಾನದನ್ನು ಖಂಡಿತ ವಾಗಿ ಒದಗಿಸುತ್ತೇನೆ." ಅದರಂತೆಯೇ ರಾಜನು ಹೋಗಿ ಪರಿಚಾರಕನೊಬ್ಬನನ್ನು ಕರೆತಂದನು.

ಕೆಲವು ದಿನಗಳು ಕಳೆದುವು. ಆ ಯುವತಿಯು ರಾಜನನ್ನು "ರಾಜ, ನಿಮ್ಮ ಮನಸ್ಸಿನ ಬೇಸರವನ್ನು ಕಳೆಯಲು ಇಲ್ಲಿ ರಾಜನ ಸಭೆಯನ್ನು ಹೊಕ್ಕು ಬನ್ನಿ. ಅಲ್ಲಿನ ಸಂವಾದ–ಸಲ್ಲಾಪಗಳಲ್ಲಿ ತೊಡಗಿ ನಿಮ್ಮ ಬೇಸರವನ್ನು ಕಳೆಯಿರಿ" ಎಂದಳು. ಸರಿ, ರಾಜನು ಆವಳೆಂದಂತೆಯೇ ಅಲ್ಲಿನ ರಾಜ-ಸಭೆಯನ್ನು ಹೊಕ್ಕು ಅಲ್ಲಿನ ಕಾರ್ಯಕಲಾಪಗಳನ್ನು ನಿರೀ ಕ್ಷಿಸತೊಡಗಿದನು. ಅಪರಿಚಿತನಾದ ಇವನನ್ನು ಮಹಾರಾಜನು ಇವನೊಬ್ಬ ತನ್ನ ಮಂತ್ರಿ ಗಳಲ್ಲಿ ಒಬ್ಬನ ಸಂಬಂಧಿಕನಿರಬಹುದೆಂದು ಊಹಿಸಿದನು. ಮಂತ್ರಿಗಳಾದರೋ ಇವನ ಸುಂದರಾಕಾರವನ್ನು ಕಂಡು ರಾಜಸಂಬಂಧಿಯಾಗಿರಬೇಕೆಂದು ಊಹಿಸಿದರು. ಕೆಲವು ದಿನ ಹೀಗೆಯೇ ಕಳೆಯಿತು. ಒಂದು ದಿನ ರಾಜ ಮತ್ತು ಮಂತ್ರಿವರ್ಗದವರು ಈ ರಾಜನ ಕುರಿತು ಮಾತನಾಡಿಕೊಂಡರು. ಈತನು ಯಾರಿಗೂ ಏನೂ ಆಗಬೇಕಾಗಿಲ್ಲವೆಂದು ತಿಳಿ ಯಿತು. ಜನರಿಗೆ ಇದರಿಂದ ಬಹಳ ಕುತೂಹಲವುಂಟಾಯಿತು. ಮರುದಿನ ಈ ಊರ ಅರಸನು ಅವನ ಪರಿಚಯವನ್ನು ಕೇಳಿದನು. ಈತನು ತನ್ನೆಲ್ಲ ವಿಷಯವನ್ನು ತಿಳಿಯಹೇಳಿ ದನು. ಈತನ ಧರ್ಮಪ್ರಿಯತೆಯನ್ನರಿತ ರಾಜನು ಇವನನ್ನು ಬಹಳವಾಗಿ ಕೊಂಡಾಡಿ ತನ್ನ ತಲೆಯ ಮುಕುಟವನ್ನು ಈತನ ತಲೆಯಮೇಲಿರಿಸಿ ಇವನ ಪಗಡಿಯನ್ನು ತನ್ನ ಶಿರದಲ್ಲಿ ಧರಿಸಿ ಈತನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದನು. ಈ ರಾಜನು ನಡೆದ ಈ ಘಟನೆ ಯನ್ನು ಯುವತಿಗೆಲ್ಲವನ್ನೂ ವಿವರಿಸಿದನು. ಅದಕ್ಕೆ ಅವಳೆಂದಳು—"ಅದೆಲ್ಲಾ ಸರಿ, ನೀವು ಇದಕ್ಕೆ ಪ್ರತಿಯಾಗಿ ಸಪರಿವಾರನಾಗಿ ಆ ರಾಜನನ್ನು ಮತ್ತು ಎಲ್ಲಾ ಆಸ್ಥಾನಿಕರನ್ನು ನಮ್ಮ ಲ್ಲಿಗೆ ಆಮಂತ್ರಿಸಿ ಬನ್ನಿರಿ" ಈತನಾದರೋ ಮೊದಲು ಸ್ವಲ್ಪ ಸಂಕೋಚಗೊಂಡನು. ಆದರೆ ಈಕೆಯ ಪ್ರಭಾವ ಮತ್ತು ಆಗ್ರಹದಿಂದಾಗಿ ರಾಜನಲ್ಲಿ ತೆರಳಿ "ಸೋದರ! ನಿಮ್ಮ ಮತ್ತು ನಿಮ್ಮ ಸಮಸ್ತ ಪರಿವಾರ ಮತ್ತು ಸೈನಿಕರಿಗೆ, ಪಟ್ಟಣಿಗರಿಗೆ ಸಹ ನಮ್ಮಲ್ಲಿಗೆ ಬರಲು ಆಮಂತ್ರಿ ಸುತ್ತೇವೆ." ಅದಕ್ಕೆ ಆ ರಾಜನೆಂದನು—"ಎಲ್ಲಾದರೂ ಭಂಗಿ ಸೇವಿಸಿದೆಯಾ! ಮನಬಂದಂತೆ ಹೇಳುವೆಯಲ್ಲಾ! ನೀನೇನೋ ನನ್ನ ಮಿತ್ರನಹುದು" ಅದಲ್ಲದೆ ಸಾಯಂಕಾಲದ ಹೊತ್ತಿಗೆ ಈತನ ಬಿಡಾರಕ್ಕೆ ತನ್ನ ಪರಿಚಾರಕರನ್ನು ಅಟ್ಟಿದಾಗ ಅಲ್ಲಿ ಏನೂ ಇಲ್ಲವಾಗಿ ತಿಳಿದುಬಂತು. ತನ್ನ ಸಂಗಡಿಗರೊಡನೆ ಈತನು ಮದ್ಯಪಾನ ಮತ್ತನಿರಬೇಕೆಂದೂ ಹೇಳಿದನು. ಇತ್ತ ಈತ

ನಿಗೂ ನೆಮ್ಮದಿಯಿಲ್ಲ. ಆ ಯುವತಿಯೊಂದಿಗೆ ಹೀಗೆಂದನು "ಅರೆ! ನನ್ನನ್ನು ಫಜೀತಿಗೆ ತಂದಿಟ್ಟೆಯಲ್ಲಾ! ನಾಳೆ ಆ ರಾಜನು ಇಲ್ಲಿಗೆ ಬಂದರೆ ನನಗೆ ಏನೆಂದಾನು? ಅದಕ್ಕೆ ಆ ಯುವತಿಯು "ಮಹಾರಾಜ! ಚಿಂತಿಸದಿರಿ. ನಿಮಗೆ ಇದರಲ್ಲಿ ನಂಬಿಕೆಯಿಲ್ಲದಿದ್ದರೆ ನನ್ನನ್ನು ಇಲ್ಲಿಗೆ ಎಲ್ಲಿಂದ ಕರೆತಂದಿರೋ ಆ ತೋಟಕ್ಕೆ ಹೋಗಿ ನೋಡಿ ಬನ್ನಿರಿ" ಎಂದಳು. ರಾಜನು ಕುದುರೆಯನ್ನೇರಿ ಅಲ್ಲಿಗೆ ಹೋಗಿ ನೋಡಿದಾಗ ಅಲ್ಲಿ ಸಮಸ್ತ ದೇವವರ್ಗವೇ ಮಹಾ ಸಂಭ್ರಮಕ್ಕೆ ಕಾರ್ಯತತ್ಪರವಾಗಿತ್ತು. ಅನಂತ ಐಶ್ವರ್ಯವು ಅಲ್ಲಿ ತುಂಬಿ ಬಂದಿತ್ತು. ಆತನು ಆಶ್ಚರ್ಯಚಕಿತನಾದನು, ಮರುದಿನ ಬೆಳಗ್ಗೆ ರಾಜನ ಸಹಿತ ಸಂಪೂರ್ಣ ನಾಗರಿಕರಿಗೆ ರಾಜ ಭೋಜನವನ್ನು ಉಣಬಡಿಸಿದನು. ಇದನ್ನು ಅರಿತ ಎಲ್ಲರೂ ಆಶ್ಚರ್ಯಮಗ್ನರಾದರು. ಭೋಜನಾನಂತರ ಎಲ್ಲಾ ದೇವವರ್ಗವೂ ಅಂತರ್ಧಾನವಾಯಿತು.

ಅನಂತರ ಆ ಯುವತಿಯೆಂದಳು: "ರಾಜನೇ, ನೀನು ಆ ಸಾಧುವಿಗೆ ಎಷ್ಟು ದಿನಗಳಿಗಾಗಿ ನಿನ್ನ ರಾಜ್ಯವನ್ನು ಕೊಟ್ಟಿರುವೆ, ಸ್ವಲ್ಪ ಆ ಪತ್ರವನ್ನು ನೋಡು''. ಅಂತೆಯೇ ರಾಜನು ನೋಡಿದಾಗ ಸಮಯವು ಪೂರ್ತಿಯಾಗಿತ್ತು. ಆಗ ಯುವತಿಯು ಅವನನ್ನು ಮನೆಗೆ ಹಿಂತಿರುಗುವಂತೆ ತಿಳಿಸಿದಳು. ರಾಜನೆಂದನು ''ದೇವಿ, ನಿನ್ನನ್ನು ಬಿಟ್ಟು ನಾನು ಒಂದು ಹೆಜ್ಜೆಯೂ ಮುಂದಿಡಲಾರೆನು. ಅದಕ್ಕೆ ಯುವತಿಯು ''ರಾಜನೇ, ನೀನು ನನ್ನನ್ನು ಏನೆಂದು ತಿಳಿದಿರುವೆ. ನಾನೇನು ನಿನ್ನ ಮಡದಿಯಲ್ಲ. ನಾನು ನಿನ್ನ ಧರ್ಮವಾಗಿದ್ದೇನೆ. ನೀನು ಯಾವಾಗ ನನ್ನನ್ನು ಬಿಡಲಿಲ್ಲವೋ ನಾನೂ ಕೂಡಾ ನಿನ್ನನ್ನು ಬಿಡಲು ಇಚ್ಛಿಪಡಲಿಲ್ಲ. ನಿನ್ನ ಮಡದಿಯಂತೆ ನಿನ್ನೊಂದಿಗಿದ್ದು ನಿನಗೆ ಯಾವ ತರದ ಕ್ಲೇಶವಾಗದಂತೆಯೂ ನೋಡಿಕೊಂಡೆನು. ಇನ್ನು ನಿನ್ನ ಇಚ್ಛೆ" ಎಂದಳು.

---

## ಸ್ವಾಮೀ ದಯಾನಂದರ ಜೀವನದ ಕೆಲವು ಘಟನೆಗಳು

● ಎಸ್. ಕೆ. ಎಸ್. ಆಚಾರ್ಯ.

ಕಾನ್‌ಪುರದಲ್ಲಿ ಒಂದುದಿನ ದಯಾನಂದರು ಗಂಗೆಯಲ್ಲಿ ವಿನೋದವಾಗಿ ಈಜಾಡುತ್ತಿದ್ದರು. ಆಗ ಕೆಲಹೊತ್ತಿನಲ್ಲಿ ಮೊಸಳೆಗಳು ಮೇಲೆದ್ದು ಕಾಣತೊಡಗಿದವು. ಗಂಗಾ ದಡದಲ್ಲಿ ನಿಂತಿದ್ದ ಪ್ಯಾರೇಲಾಲರು ಕೂಗಿ ಹೀಗೆಂದರು—"ಮಹಾಶಯ! ನೋಡಿರಿ, ಮೊಸಳೆಗಳು ಮೇಲೆದ್ದು ಕಾಣಿಸತೊಡಗಿವೆ. ನಿಮ್ಮ ಜೀವನನ್ನು ಉಳಿಸುವ ಕಾರ್ಯವನ್ನು ನೋಡಿಕೊಳ್ಳಿ" ನಿರ್ಭಯರಾಗಿ ದಯಾನಂದರೆಂದರು—"ಸೋದರ! ನಾವು ಅವುಗಳಿಗೆ ಏನಾದರೂ ಕೇಡು ಮಾಡದಿದ್ದಲ್ಲಿ ಅವು ಏಕೆ ನಮ್ಮನ್ನು ಕಷ್ಟಕ್ಕೊಳಪಡಿಸಬಲ್ಲವು" ?

x x x x

ಕುಂಭಮೇಳದ ಸಮಯ ಸಾಧುವೊಬ್ಬನು ದಯಾನಂದರನ್ನು ಕುರಿತು—"ಸ್ವಾಮೀಜಿ, ತಾವು ಜ್ಞಾನಿಗಳಾಗಿಯೂ ಸಾಮಾನ್ಯ ಭಿಕ್ಷುಕನಂತೆ ಪರಮಾತ್ಮನ ಪ್ರಾರ್ಥನೆ ಮಾಡುತ್ತಿರುವಿರಿ. ಇದು ಅಜ್ಞಾನಿಗಳ ಕರ್ತವ್ಯವಲ್ಲವೆ?" ಎಂದು ಪ್ರಶ್ನಿಸಿದನು. ಅದಕ್ಕೆ ದಯಾನಂದರು

ಉತ್ತರವೀಯುತ್ತಾ "ಜ್ಞಾನಿಗಳಾದವರು ಪರಮಾತ್ಮನನ್ನು ಪ್ರಾರ್ಥಿಸುವುದಿಲ್ಲವೆನ್ನುವುದು ಸರಿಯಲ್ಲ. ವಾಸ್ತವಿಕವಾದ ವಿಷಯವೆಂದರೆ ಹಸಿವು-ತೃಷೆಗಳುಳ್ಳವನು ಹೇಗೆ ಅನ್ನ-ಜಲಾದಿಗಳಿಂದ ತೃಪ್ತನಾಗುತ್ತಾನೆಯೋ ಅಂತೆಯೇ ಆತ್ಮಸಂಬಂಧಿಯಾದ ನ್ಯೂನತೆಗಳು ಈಶ್ವರಾರಾಧನೆ ಮತ್ತು ಬಲಯಾಚನೆಯ ಹೊರತು ಪೂರ್ತಿಯಾಗಲಾರವು" ಎಂದರು.

x x x x

ಫರುಖಾಬಾದ್‌ನ ಕಮಿಶನರ್ ಸ್ಕಾಟ್ ಮಹಾಶಯರು ಒಮ್ಮೆ ಸ್ವಾಮೀಜಿಯವರನ್ನು ಕೇಳಿದರು—"ಸ್ವಾಮೀಜಿ, ಹಿಂದಿನ ಜನ್ಮಕರ್ಮಗಳಿಗೆ ಪ್ರಮಾಣವಿದೆಯೇ?" ಸ್ವಾಮಿಗಳೆಂದರು, "ಮಹಾಶಯ! ನಿಮ್ಮ ಕಾಲಿನಲ್ಲಿ ಈ ತೊದರೆಯೇನು? ಕುಂಟುತ್ತಾ ನಡೆಯುವಿರಲ್ಲಾ!" "ಇದು ದೈವೇಚ್ಛೆ" ಎಂದರು ಸಾಹೇಬರು. "ಪರಮಾತ್ಮನ ಇಚ್ಛೆ ಎಂದೆನ್ನಬೇಡಿ. ಆ ದೇವನು ಬಹಳ ದಯಾಳು ಮತ್ತು ನ್ಯಾಯಪರನು. ಯಾವುದಾದರೂ ನಮ್ಮ ತಪ್ಪುಗಳ ಕಾರಣ ನಮಗೆ ಈ ಜನ್ಮದಲ್ಲಿ ಕಂಡುಬಾರದೆ ಇದ್ದರೆ ಅದು ಪೂರ್ವಜನ್ಮದ ಪಾಪದ ಫಲವೆಂದು ತಿಳಿಯಬೇಕಾಗಿದೆ" ಎಂದು ಸ್ವಾಮಿ ದಯಾನಂದರು ಉತ್ತರಿಸಿದರು.

x x x x

ಅಮೃತಸರದಲ್ಲಿ ಭಕ್ತನೊಬ್ಬನು ಸ್ವಾಮಿಗಳನ್ನು ಹೀಗೆಂದು ಹೇಳಿದನು:—ದೀನಬಂಧು, ಧನ-ಕನಕವುಳ್ಳವರು ದಾನ ಪುಣ್ಯಗಳನ್ನು ಮಾಡುತ್ತಾರೆ. ದಾನ ಕೊಡುತ್ತಾರೆ, ಧರ್ಮಶಾಲೆ ಮುಂತಾದುವನ್ನು ಕಟ್ಟುತ್ತಾರೆ. ಆದರೆ ದರಿದ್ರನಾದವನು ಏನು ದಾನ-ಧರ್ಮ ಮಾಡಬಲ್ಲನು?" ಸ್ವಾಮಿಜಿ ಉತ್ತರವಿತ್ತರು—"ನೀನು ಕೂಡಾ ಒಳ್ಳೆಯ ಧರ್ಮಾತ್ಮನಾಗಬಲ್ಲೆ, ಪ್ರಪಂಚದಲ್ಲಿ ಒಬ್ಬ ಪುರುಷನು ದಾನ-ಧರ್ಮ ಮಾಡುವುದು ಮತ್ತು ಪರೋಪಕಾರದಿಂದ ಧರ್ಮಿಷ್ಠನೆನಿಸುವಂತೆ ತಾನು ಇತರರಿಗೆ ಕೆಡುಕನ್ನುಂಟುಮಾಡದೆ, ಪರನಿಂದೆಯನ್ನು ಮಾಡದಿರುವವನೇ ಒಳ್ಳೆಯವನೆಂದೆನಿಸಿಕೊಳ್ಳುತ್ತಾನೆ. ಪಾಪಕರ್ಮವನ್ನು ಮಾಡದೆ ಬಾಳಿ ಬದುಕುವುದೇ ಪ್ರಪಂಚಕ್ಕೆ ಒಳಿತನ್ನುಂಟುಮಾಡುವುದು."

x x x x

ಶಾಹಜಹಾನ್‌ಪುರದಲ್ಲಿ ನಡೆದ ಘಟನೆಯಿದು. ಒಂದು ದಿನ ಸ್ವಾಮಿಗಳ ಅನುಯಾಯಿಗಳು ನಿಯತಕಾಲಕ್ಕೆ ಅರ್ಧ ಗಂಟೆ ತಡವಾಗಿ ಅವರ ಬಳಿ ಬಂದರು. ಇದನ್ನರಿತ ದಯಾನಂದರು ಹೇಳಿದರು—"ಇಂದು ನಮ್ಮ ದೇಶವಾಸಿಗಳು ಸಮಯದ ಮಹತ್ವವನ್ನು ಮರೆತಿರುವರು. ಸಮಯದ ಬೆಲೆ ನಮಗಾಗ ತಿಳಿಯುತ್ತದೆ, ಯಾವಾಗ ಮೃತ್ಯುಶಯ್ಯೆಯಲ್ಲಿ ಬಿದ್ದಿರುವ ರೋಗಿಯೊಬ್ಬನನ್ನು ಕಂಡು ವೈದ್ಯನೆನ್ನುತ್ತಾನೆ ಐದು ನಿಮಿಷ ಮೊದಲಾಗಿ ನನ್ನನ್ನು ಇಲ್ಲಿಗೆ ಕರೆತರುತ್ತಿದ್ದರೆ ಈತನನ್ನು ಉಳಿಸಿ ಬದುಕಿಸಬಹುದಿತ್ತು. ಈಗ ಕಾಲಾತೀತವಾಗಿದೆ. ಲಕ್ಷಾಂತರ ರೂಪಾಯಿ ಖರ್ಚು ಮಾಡಿದರೂ ಈತನು ಉಳಿಯುವಂತಿಲ್ಲ.

x x x x

1881ನೆಯ ಇಸವಿ ಸ್ವಾಮಿ ದಯಾನಂದರು ವೀರಭೂಮಿ ಚಿತ್ತೂರಿಗೆ ಚಿತ್ತೈಸಿದರು. ಒಂದು ದಿನ ಕೆಲವು ರಾಜಕರ್ಮಚಾರಿಗಳೊಂದಿಗೆ ಸಂಚರಿಸುತ್ತಾ ಚಿತ್ತೂರಿನ ಸಾಹಸಿ ಮಹಿಳೆ ವೀರಪದ್ಮಿನಿಯ ಮಂದಿರದ ಬಳಿ ಬಂದರು. ಅಲ್ಲಿ ಮಾರ್ಗದಲ್ಲಿ ಚಿಕ್ಕಪುಟ್ಟ ಬಾಲಕ-ಬಾಲಕಿಯರು ಆಟವಾಡುತ್ತಿದ್ದರು. ಅವರಲ್ಲಿ ಒಬ್ಬ ಐದು ವರ್ಷದ ಬಾಲಿಕೆಯನ್ನು ಕಂಡು ಸ್ವಾಮೀಜಿ ನತಮಸ್ತಕರಾದರು. ಹತ್ತಿರವಿದ್ದವರಿಗೆ ಇದರ ಮರ್ಮ ತಿಳಿಯದೆ ಆಶ್ಚರ್ಯಚಕಿತರಾಗಿ ಒಬ್ಬರ ಮುಖವನ್ನೊಬ್ಬರು ನೋಡಹತ್ತಿದರು. ಅವರ ಆಶ್ಚರ್ಯವನ್ನರಿತ ಶ್ರೀ ದಯಾನಂದರು ಗಂಭೀರವದನರಾಗಿ ಹೀಗೆಂದರು "ನೀವು ಈಕೆಯನ್ನು ನೋಡಲಾರಿರಾ! ವೀರಭೂಮಿಯ ಮಾತೃಶಕ್ತಿ ನಮ್ಮ ಕಣ್ಮುಂದೆ ನಿಂತಿದೆ".

---

# ಸ್ವಾಧ್ಯಾಯಾನ್ಮಾ ಪ್ರಮದಃ

ಜೀವನದಲ್ಲಿ ಆಶಾಜ್ಯೋತಿ ಬೆಳಗಬೇಕೆ? ಅಜ್ಞಾನಾಂಧಕಾರ ನಾಶವಾಗಬೇಕೆ? ಮಾನವತೆಯ ಪರಿಪೂರ್ಣತೆ ಹಾಗೂ ದೈವತ್ವ ಸಾಧನೆ ಆಗಬೇಕೆ? ಇವುಗಳ ಸಮುಚಿತ ಮಾರ್ಗದರ್ಶನಕ್ಕಾಗಿ ಈ ಕೆಳಗಿನ ನಮ್ಮ ಪ್ರಕಟಣೆಗಳನ್ನು ಅಧ್ಯಯನ ಮಾಡಿರಿ:

೧. ಸತ್ಯದ ಅರ್ಥವೇನೆಂದು ತಿಳಿಯಬೇಕೆ?
"ಸತ್ಯಾರ್ಥ ಪ್ರಕಾಶ"ವನ್ನು ಓದಿರಿ. ಬೆಲೆ 22-00 & 25—00

೨. ಗಾಯತ್ರಿ ಮಂತ್ರದ ಹಿರಿಮೆಯನ್ನು ತಿಳಿಯ ಬಯಸುವಿರಾ?
"ವೇದಮಾತಾ ಗಾಯತ್ರೀ" —ಅರ್ಥವಿವರಣೆ ಸಹಿತ ಬೆಲೆ 5—00

೩. ಮಾನವತ್ವವೇನೆಂದು ಅರಿಯಲಿಚ್ಛಿಸುವಿರಾ?
"ಆದರ್ಶ ಮಾನವ" ಗ್ರಂಥವನ್ನು ಓದಿರಿ ಬೆಲೆ 2—50

೪. ವೈದಿಕ ತತ್ವಗಳನ್ನು ತಿಳಿಯಲಿಚ್ಛಿಸುವಿರಾ?
"ಉಪದೇಶ ಮಂಜರಿ" ಓದಿರಿ ಬೆಲೆ 4—00

೫. ಶ್ರೀ ರಾಮನನ್ನು ಪೂಜಿಸುವ ವಿಧಾನ ಹೇಗೆ-ಎಂಬುದನ್ನು ಅರಿಯಲು
"ರಾಮಭಕ್ತಿಯ ರಹಸ್ಯ" ಓದಿರಿ ಬೆಲೆ 0—50

೬. ಧರ್ಮದ ನಿಜ ಸ್ವರೂಪವನ್ನರಿಯಬೇಕಾದರೆ
"ಧರ್ಮರಹಸ್ಯ"ವನ್ನು ಓದಿರಿ ಬೆಲೆ 1—00

೭. ಯುಗಪುರುಷನೋರ್ವನ ಮಹೋನ್ನತ ಜೀವನವನ್ನರಿಯಲು ಓದಿರಿ:
"ರಾಷ್ಟ್ರಪುರುಷ ಮಹರ್ಷಿ ದಯಾನಂದ ಸರಸ್ವತಿ" ಬೆಲೆ 10-00 & 12—00

೮. ಶಾಂತಿ ಮತ್ತು ಸೌಭಾಗ್ಯಗಳು ಲಭಿಸಬೇಕೆ?
"ಶಾಂತಿ ಮತ್ತು ಸೌಭಾಗ್ಯ" ಗ್ರಂಥವನ್ನು ಓದಿರಿ ಬೆಲೆ 1—00

೯. ಯೋಗದ ಬಗ್ಗೆ ಸ್ಪಷ್ಟವಾಗಿ ತಿಳಿಯಬೇಕೆ?
"ಯೋಗದೀಪ" ಓದಿರಿ ಬೆಲೆ 15—00

೧೦. 'ಪೂಜಾರಹಸ್ಯ' ಗ್ರಂಥವನ್ನು ಓದಿರಿ ಬೆಲೆ 2—00

೧೧. 'ಈಶ್ವರ ವಿಚಾರ'ವನ್ನು ಅಧ್ಯಯನ ಮಾಡಿರಿ ಬೆಲೆ 1—00

೧೨. ಸ್ವಾಮೀ ಶ್ರದ್ಧಾನಂದ ಬೆಲೆ 6—00

೧೩. ಋಗ್ವೇದ ದರ್ಶನ [ಪ್ರಥಮ ಭಾಗ] ಬೆಲೆ 25-00 & 30—00

೧೪. ಆದರ್ಶ ಜೀವನದ ದ್ವಾದಶ ಸೂತ್ರಗಳು ಬೆಲೆ 5—00

## ಬಾ. ಸಾಮಗರ ಭಾರಿ ಗಮ್‌ಜಲ್ದ ಆಟಗಳು



**30–10–82** ಶನಿವಾರ ರಾತ್ರಿ **10ಕ್ಕೆ**

ಮುಂಬೈ ರಂಗ ಭವನದಲ್ಲಿ
(ದೋಬಿತಲಾವ್ ಬಳಿ)

**ಬಸರೂರು ಭಾಗ್ಯ**

**1–11–82** ಸೋಮವಾರ
ರಾತ್ರಿ **10ಕ್ಕೆ**

ಮುಂಬೈ ವಿಶ್ವೇಶ್ವರಯ್ಯ ಹಾಲ್‌ನಲ್ಲಿ

**ರಾಮ ರಾವಣರ
ರಾದ್ಧಾಂತ**

**3–11–82** ಬುಧವಾರ ರಾತ್ರಿ **10ಕ್ಕೆ**

ಪೂನಾ ತಿಲಕ್ ಸ್ಮಾರಕ ಮಂದಿರದಲ್ಲಿ

**ಬಸರೂರು ಭಾಗ್ಯ**

4–11–82 ಗುರುವಾರ ರಾತ್ರಿ **10ಕ್ಕೆ** ಠಾಣಾ ಗಡ್‌ಕರಿ ಹಾಲ್‌ನಲ್ಲಿ

**ಬಸರೂರು ಭಾಗ್ಯ**

6–11–82 ಶನಿವಾರ ರಾತ್ರಿ 10ಕ್ಕೆ ಮುಂಬೈ ರಂಗ ಭವನದಲ್ಲಿ

**ಬಗ್ಗು ಪಂಜುರ್ಲಿ ಪ್ರತಾಪ**

---

ವಿ ಸೂ: 5 ಜನ ಸಾಮಗರ ಅಪೂರ್ವ ಅಭಿನಯ, ಬಡಗು–ತೆಂಕು ತಿಟ್ಟುಗಳ ಖ್ಯಾತ ಪ್ರತಿಭಾವಂತ ಯಕ್ಷಗಾನ ಕಲಾವಿದರ ಸಂಗಮ, ನಡುರಾತ್ರಿಗೆ ಪ್ರತಿಯೊಬ್ಬರಿಗೆ ಉಚಿತ ಚಾ–ಮುಂತಾದ ವಿಶೇಷಗಳಿಗೆ ಕರಪತ್ರ ಮತ್ತು ಉದಯವಾಣಿ ಓದಿರಿ.

## ಚಂದಾದಾರರಲ್ಲಿ ಮನವಿ

೧. ಅಂಚೆ ವಿಳಂಬದಿಂದಾಗಲಿ ಅಥವಾ ಮತ್ತಾವುದೇ ಕಾರಣದಿಂದ ತಮಗೆ ಪತ್ರಿಕೆ ತಲುಪದಿದ್ದಲ್ಲಿ ಆ ತಿಂಗಳ ಅಂತ್ಯದವರೆಗೆ ಕಾದುನೋಡಿ, ದಯೆ ಮಾಡಿ ನಮಗೆ ತಿಳಿಸಿರಿ. ಪತ್ರವ್ಯವಹಾರ ಮಾಡುವಾಗ ಚಂದಾ ಸಂಖ್ಯೆಯನ್ನು ತಿಳಿಸಿರಿ.

೨. ಬಹಳಷ್ಟು ವಾರ್ಷಿಕ ಸದಸ್ಯರು ಹಾಗೂ ಆಜೀವ ಸದಸ್ಯರು ತಮ್ಮ ಚಂದಾವನ್ನು ಬಾಕಿ ಉಳಿಸಿಕೊಂಡಿದ್ದಾರೆ ಅವರಿಗೆ ಪತ್ರಿಕೆಯ ಮುಖೇನ ಹಾಗೂ ಪತ್ರದ ಮೂಲಕವೂ ಅನೇಕ ಬಾರಿ ವಿನಂತಿಸಿದ್ದೇವೆ. ಅಂಥವರು ತಮ್ಮ ಬಾಕಿ ಹಣವನ್ನು ಕೂಡಲೇ ಕಳುಹಿಸಿ ನಮ್ಮ ಕಾರ್ಯದಲ್ಲಿ ಸಹಕರಿಸಿರಿ.

೩. ವಾರ್ಷಿಕ ಸದಸ್ಯರಾದವರು ಆಜೀವ ಸದಸ್ಯರಾಗಿ ಪ್ರೋತ್ಸಾಹಿಸಿರಿ ಹಾಗೂ ತಮ್ಮ ಬಂಧುಮಿತ್ರರುಗಳನ್ನೂ ಸದಸ್ಯರನ್ನಾಗಿ ಮಾಡಿ ಸಹಕಾರ ನೀಡಿರಿ.

೪. ಪ್ರತಿಯೋರ್ವ ಸದಸ್ಯರೂ ಸಾಧ್ಯವಾದಷ್ಟು ಸದಸ್ಯರನ್ನು ಕೂಡಿಸಿ ಕೊಡಿರಿ. ಪ್ರತಿಯೋರ್ವರೂ ಕನಿಷ್ಠ ಮತ್ತೊಬ್ಬರನ್ನಾದರೂ ಸದಸ್ಯರ ಬಳಗಕ್ಕೆ ಸೇರಿಸಲು ಸಂಕಲ್ಪಿಸಿರಿ.

ಈ ರೀತಿ ವೇದಪ್ರಚಾರದ ಪವಿತ್ರ ಯಜ್ಞದಲ್ಲಿ ತಮ್ಮ ಪಾಲಿನ ಆಹುತಿಯನ್ನು ಸಮರ್ಪಿಸಿರಿ.

---

## ಪ್ರಕಟಿತ ಗ್ರಂಥಗಳು ಸಿಗುವ ಸ್ಥಳಗಳು

೧. ಕೆನರಾ ಏಜನ್ಸೀಸ್ ರಾಜಕಮಲ್ ರೋಡ್, ಶಿವರಾಮ ಪೇಟೆ, ಮೈಸೂರು
೨. ಸಾಹಿತ್ಯ ಕೇಂದ್ರ, ಪಂಜೆ ಮಂಗೇಶರಾವ್ ರಸ್ತೆ, ಮಂಗಳೂರು
೩. ಅತ್ರಿ ಬುಕ್ ಸೆಂಟರ್, ಬಲ್ಮಠ, ಮಂಗಳೂರು
೪. ನವಭಾರತ ಪುಸ್ತಕ ಭಂಡಾರ, ಸಂತೆಕಟ್ಟೆ, ಉಡುಪಿ
೫. ವೈ ಎಚ್. ವೆಂಕಟರಮಣಪ್ಪ ಕಲ್ಯಾಣಮಂದಿರ, ಪ್ಯಾಲೇಸ್ ರಸ್ತೆ, ಬೆಂಗಳೂರು.
೬. ವೇದಾಂತ ಬುಕ್ ಹೌಸ್, ಚಾಮರಾಜಪೇಟೆ, ಬೆಂಗಳೂರು
೭. ಟಿ. ಎಸ್. ಕೃಷ್ಣಯ್ಯ ಶೆಟ್ಟಿ ಅಂಡ್ ಸನ್ಸ್, ಚಿಕ್ಕಪೇಟೆ, ಬೆಂಗಳೂರು
೮. ಬುಕ್ ಸೆಂಟರ್, ಸ್ಟೇಶನ್ ರೋಡ್, ಗುಲ್ಬರ್ಗ
೯. ಸಮಾಜ ಪುಸ್ತಕಾಲಯ, ಧಾರವಾಡ
೧೦. ಸಾಹಿತ್ಯ ಭಂಡಾರ, ಹುಬ್ಬಳ್ಳಿ

Veda Prakash R. No. 27437/75 Regd. No. KRNR 13/75-76